

ಕಾಯಕವೇ ಕೈಲಾಸ

# ಸಿದ್ಧಗಂಗಾ

## ಸುವರ್ಣ ಮಹೋತ್ಸವ ವರ್ಷ



ಸಂಪುಟ : ೫೦ ಜುಲೈ ೨೦೧೪ ಸಂಚಿಕೆ : ೦೭




ತುಮಕೂರಿನ ವಿನೋಬಾನಗರದಲ್ಲಿ ನೂತನವಾಗಿ ಪ್ರಾರಂಭಿಸಿದ ಕರ್ನಾಟಕ ಬ್ಯಾಂಕ್ ಲಿ.ನ 606ನೇ ಶಾಖೆಯನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಜ್ಯೋತಿ ಬೆಳಗಿಸಿ ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಬ್ಯಾಂಕಿನ ಸಿಇಓ ಶ್ರೀ ಪಿ. ಜಯರಾಮ್ ಭಟ್, ಸಹಾಯಕ ಮಹಾಪ್ರಬಂಧಕ ಶ್ರೀ ಬಿ.ಎಸ್. ರಾಮಚಂದ್ರ, ಶಾಖಾ ಪ್ರಬಂಧಕ ಶ್ರೀ ಬಿ.ಜಿ. ಅಜೇಯ್ ಮೊದಲಾದವರು ಉಪಸ್ಥಿತರಿದ್ದರು.




ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದಲ್ಲಿ ಇತ್ತೀಚೆಗೆ ಏರ್ಪಡಿಸಿದ್ಧ ಅಂತಿಮ ಪದವಿ ವಿದ್ಯಾರ್ಥಿಗಳ ಬೀಳ್ಕೊಡುಗೆ ಸಮಾರಂಭ ಪೂಜ್ಯ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆಯಿತು. ವಿದ್ಯಾರ್ಥಿಗಳನ್ನುದ್ದೇಶಿಸಿ ಡಾ. ಎಂ.ಎನ್. ಚನ್ನಬಸಪ್ಪನವರು ಮಾತನಾಡಿದರು. ಪ್ರಾಚಾರ್ಯ ಶ್ರೀ ಶಿವಕುಮಾರಯ್ಯ ಅವರು ಉಪಸ್ಥಿತರಿದ್ದರು.



ಉಪ ಲೋಕಾಯುಕ್ತ ಶ್ರೀ ಸುಭಾಷ ಆದಿ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಾಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಜಿಲ್ಲಾ ಸರ್ಕಾರಿ ನೌಕರರ ಸಂಘದ ಅಧ್ಯಕ್ಷ ಶ್ರೀ ಜಿ.ಎಂ. ಸಣ್ಣಮುದ್ದಯ್ಯ, ಎಸ್.ಬಿ.ಎಂ.ನ ಶ್ರೀ ಕೊಪ್ಪಲ್ ನಾಗರಾಜ್, ಉಪಸ್ಥಿತರಿದ್ದರು.



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೫೦ ಜುಲೈ ೨೦೧೮ ಸಂಚಿಕೆ : ೦೭

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕ:
ಹೆಚ್.ಬಿ. ಗಂಗಾಧರಯ್ಯ

ವಿತರಣೆ :
ಆರ್.ಎಸ್. ಮಲ್ಲೇಶಪ್ಪ

**ಹಳೆಯ ವಿದ್ಯಾರ್ಥಿಗಳ ಸಂಘ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ

**ಒಳಪುಟಗಳಲ್ಲಿ ....................**

2. ಸಂಪಾದಕೀಯ
3. ಶ್ರೀವಾಣಿ
4. ಸಿದ್ಧಲಿಂಗೇಶ್ವರ ವಚನ - ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ
5. ಮಧುಬಿಂದು -ಶ್ರೀ ಸಿದ್ದೇಶ್ವರಸ್ವಾಮಿಗಳು
10. ಬಸವಭಕ್ತಿ -ಶ್ರೀ ಪಂಡಿತಾರಾಧ್ಯ ಶಿವಾಚಾರ್ಯಸ್ವಾಮಿಗಳು
15. ಹಿರಿಯರಿಗೆ ನಾವು ಆಸರೆಯಾಗೋಣ -ಯು.ಎನ್. ಸಂಗನಾಳಮಠ
17. ಅನುಭಾವಿ ಶರಣ ಹಡಪದ ಅಪ್ಪಣ್ಣ -ಆರ್.ಎಸ್. ಚಾಪಗಾವಿ
20. ಬಯಲ ಪ್ರಸಾದಿ ಶಂಕರ ದಾಸಿಮಯ್ಯ -ಶಕುಂತಲಾ ಯು.
24. ಅಂತರಂಗದ ಜ್ಞಾನಕ್ರಿಯೆಯಲ್ಲಿ ರೂಪುಗೊಳ್ಳಬೇಕು-ಆರ್.ಬಿ. ಚಿಲುಮಿ
27. ಗುಲ್ಬರ್ಗ ನಗರದಲ್ಲಿ ಆಚರಿಸಿದ ಪೂಜ್ಯರ 107ನೇ ಜನ್ಮದಿನೋತ್ಸವದ ವರದಿ
29. ಸಸ್ಯ ಸಂಜೀವಿನಿ-ಆರೋಗ್ಯ ನೀಡುವ ಅತ್ತಿಮರ -ಡಾ॥ ಶೈಲೇಶ್ ಎಂ.ಡಿ.
31. ಪ್ರಕೃತಿ ಚಿಕಿತ್ಸೆ -ಜಿ.ವಿ.ವಿ. ಶಾಸ್ತ್ರಿ
32. ದಾನಿಗಳ ಪಟ್ಟಿ

ಚಂದಾ ವಿವರ : ವಾರ್ಷಿಕ ಚಂದಾ ರೂ. 200/-
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 12.00

## ಅಸ್ಪೃಶ್ಯತೆ

ಸಂ
ಪಾ
ದ
ಕೀ
ಯ

**'ಅಸ್ಪೃಶ್ಯತೆ ವಿರುದ್ಧ ಜಾಗೃತಿಗೆ ಉಪವಾಸ'**

ಅತ್ಯಂತ ಶ್ಲಾಘನೀಯವಾದ ಕಾರ್ಯಕ್ರಮ. ವೀರಶೈವ ಲಿಂಗಾಯತ ಧರ್ಮ ಗುರುಗಳು ಇಟ್ಟಿರುವ ದಿಟ್ಟಹೆಜ್ಜೆ. ಸಮಾಜೋದ್ಧರಣ ಕ್ರಾಂತಿಗೆ ನಾಂದಿ. ಭಾಗವಹಿಸಿದ ಎಲ್ಲ ಪೂಜ್ಯಶ್ರೀಗಳೂ ವಂದನೀಯರು. ಬಸವಪಥದಲ್ಲಿ ನಡೆಯುವ ಅಭಿನಂದನೀಯ ನಿರ್ಧಾರ. ಮಾನವೀಯತೆಯ ಮಂಗಳ ಪ್ರಾರಂಭ. ಬಸವಕಲ್ಯಾಣದಲ್ಲಿ ಜೂನ್ ೯ರಂದು ಸಮಾವೇಶಗೊಂಡಿದ್ದ ಪೂಜ್ಯ ಮಠಾಧೀಶರ ಒಮ್ಮತದ ಸಂಕಲ್ಪ, ಅತ್ಯಂತ ಸ್ವಾಗತಾರ್ಹ.

ಭಾಗವಹಿಸಿದ್ದ ಎಲ್ಲ ಮಠಾಧೀಶರೂ ತಮ್ಮ ತಮ್ಮ ಮಠಗಳಲ್ಲಿ ಅಸ್ಪೃಶ್ಯತೆಯ ನಿವಾರಣೆಯನ್ನು ಮಾಡುತ್ತಲೇ ಬಂದವರಾಗಿದ್ದಾರೆ. ಶರಣ ಧರ್ಮದ ಸಂದೇಶವನ್ನು ವಿವಿಧ ರೀತಿಯಲ್ಲಿ ಆಚರಣೆಗೆ ತಂದವರಾಗಿದ್ದಾರೆ. ತಮ್ಮ ಪ್ರವಚನ, ಆಶೀರ್ವಚನಗಳ ಮೂಲಕ ಜನತೆಗೆ ಮುಟ್ಟಿಸುತ್ತಲೇ ಬಂದವರಾಗಿದ್ದಾರೆ. ಅನೇಕ ದಲಿತ ಬಂಧುಗಳಿಗೆ ಬಸವಣ್ಣನವರನ್ನು, ಅವರ ತತ್ವಗಳನ್ನು ಬೋಧಿಸುತ್ತ ಬಂದಿದ್ದಾರೆ. ಸಾಹಿತ್ಯವನ್ನು ರಚಿಸಿದ್ದಾರೆ. ಉತ್ಸವಗಳಲ್ಲಿ ಭಾಗಿಗಳನ್ನಾಗಿಸಿದ್ದಾರೆ. ತಮ್ಮ ಮಠಗಳಲ್ಲಿ ದಲಿತ ಮಕ್ಕಳಿಗೆ ಆಶ್ರಯವಿತ್ತು ಭವಿಷ್ಯದ ಬದುಕಿಗೆ ಮಾರ್ಗದರ್ಶನ ಮಾಡಿರುತ್ತಾರೆ. ಬಸವಣ್ಣನವರ 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನ್ನೆಲ್ಲ' 'ಇವನಮ್ಮವ ಇವನಮ್ಮವ ಇವನಮ್ಮವ' ನೆಂಬ ಅಭಿಮಾನದಿಂದ ಅಪ್ಪಿಕೊಂಡು ಬಂದಿದ್ದಾರೆ. ಇಷ್ಟಲಿಂಗ ಧಾರಣೆ ಮಾಡಿದ್ದಾರೆ. ವಿವಾಹಗಳನ್ನು ಮಾಡಿಸಿದ್ದಾರೆ. ದಲಿತ ಸಮುದಾಯಕ್ಕೆ ಧರ್ಮ ಗುರುಗಳನ್ನು ರೂಪಿಸಿದ್ದಾರೆ. ಈ ಎಲ್ಲವನ್ನು ಎಲ್ಲ ಸಮಾಜಗಳೂ ನೋಡುತ್ತಲೇ ಬಂದಿದ್ದಾರೆ. 'ಗದಗದ ತೋಂಟದಾರ್ಯ ಮಠದ ಪೂಜ್ಯ ಡಾ. ಸಿದ್ಧಲಿಂಗಸ್ವಾಮೀಜಿ ಅವರು ಮಠಾಧೀಶರು ಬೇರೆಡೆಗೆ ಹೆಚ್ಚಿನ ಗಮನಕೊಡದೆ ಅಸ್ಪೃಶ್ಯತೆ ಆಚರಣೆಯ ನಿವಾರಣೆಯ ಒಂದಂಶದ ಕಾರ್ಯಕ್ರಮ ಹಮ್ಮಿಕೊಂಡು ಅದನ್ನು ಕಾರ್ಯಗತ ಗೊಳಿಸಲು ಪ್ರಯತ್ನಿಸಬೇಕು'- ಎಂದಿರುವುದು ಸ್ವಾಗತಾರ್ಹವಾದುದಾಗಿದೆ. ಶ್ರೀಗಳವರ ಆಶಯದತ್ತ ಕರ್ನಾಟಕದ ಎಲ್ಲ ಮಠಗಳೂ ಮುಖಮಾಡಿದಲ್ಲಿ ಅನತಿಕಾಲದಲ್ಲಿಯೇ ಯಾವ ಕಾನೂನು ಕಟ್ಟಳೆಗಳೂ ಸಾಧಿಸಲಾಗದ ಮಹಾಸುಧಾರಣೆಯನ್ನೂ ತರಬಹುದು. ಅಸ್ಪೃಶ್ಯತೆ ಎಂಬುದು ಮಾನವ ಕುಲಕ್ಕೇ ಅಂಟಿದ ಬಹುದೊಡ್ಡ ಕಳಂಕ. 'ಸಿದ್ಧಗಂಗಾ' ಬಸವಕಲ್ಯಾಣದಲ್ಲಿ ಜರುಗಿದ ಮಠಾಧೀಶರ ಸಮಾವೇಶದ ನಿರ್ಣಯಗಳನ್ನು ತುಂಬು ಹೃದಯದಿಂದ ಸ್ವಾಗತಿಸುತ್ತದೆ.

*–ಸಂಪಾದಕ*







## 'ಆಧ್ಯಾತ್ಮಿಕತೆ'

ಶ್ರೀ
ವಾ
ಣಿ

**ಜ**ಗತ್ತಿನ ರಾಷ್ಟ್ರಗಳಲ್ಲಿ ಭರತಖಂಡ ವಿಶಿಷ್ಟವಾದುದಾಗಿದೆ. ಅದಕ್ಕೆ ಕಾರಣ ಅದು ಸನಾತನಕಾಲದಿಂದಲೂ ಕಾಪಾಡಿಕೊಂಡು ಬಂದಿರುವ ಆಧ್ಯಾತ್ಮಿಕತೆಯಾಗಿದೆ. ಇಹಲೋಕದ ಬದುಕನ್ನು ತಿರಸ್ಕರಿಸದೆ ಪರಲೋಕದ ಪಾರಮ್ಯವನ್ನು ತನ್ನ ದೈನಂದಿನ ಜೀವನದಲ್ಲಿ ಅನುಸರಿಸುತ್ತ ಬಂದುದಾಗಿದೆ. ಇಲ್ಲಿ ಅರಳಿದ ಎಲ್ಲ ಧರ್ಮಗಳೂ ತನ್ನದೇ ಆದ ರೀತಿಯಲ್ಲಿ ಆಧ್ಯಾತ್ಮಿಕತೆಯನ್ನು ಅಪ್ಪಿಕೊಂಡವಾಗಿವೆ. ಮಾರ್ಗಗಳು ಬೇರೆ ಬೇರೆ ಇರಬಹುದು. ಆದರೆ ಅವುಗಳ ಗುರಿ ಒಂದೇ ನದಿಗಳಿದ್ದಂತೆ. ನದಿಗಳು ಎಲ್ಲಿ ಹರಿದರೂ, ಹೇಗೆ ಹರಿದರೂ ಕೊನೆಗೆ ಸೇರುವುದು ಸಮುದ್ರವನ್ನೇ ಎನ್ನುವ ಹಾಗೆ **"ಯಥಾಗಚ್ಛತಿಸಾಗರಂ"** ಅವುಗಳ ಜೀವನಶೈಲಿ. ಭರತ ವರ್ಷವನ್ನಾಳಿದ ರಾಜರುಗಳೆಲ್ಲ ಧರ್ಮಪ್ರಿಯರೇ ಆಗಿದ್ದರು. ಮೈಸೂರು ರಾಜ್ಯವನ್ನಾಳಿದ ಅರಸರು ಧರ್ಮನಿಷ್ಠರಾಗಿದ್ದುದು ಜನಜನಿತ. ರಾಜರ್ಷಿಗಳಾಗಿದ್ದಂತೆ ಧರ್ಮದ್ರಷ್ಟಾರರೂ ಆಗಿದ್ದರು. ತಮ್ಮ ಆಡಳಿತವನ್ನೆಲ್ಲ ಧರ್ಮಜ್ಯೋತಿಯ ಬೆಳಕಿನಲ್ಲಿಯೇ ನಡೆಸಿದರು. ತಮಗೆ ದಿವಾನರಾಗಿದ್ದವರು, ಮಂತ್ರಿಗಳು, ಅಧಿಕಾರಿಗಳು, ಸಲಹೆಗಾರರು, ಆಡಳಿತಯಂತ್ರದ ವಿವಿಧ ಸ್ಥಾನಗಳಲ್ಲಿದ್ದವರೆಲ್ಲರೂ ಧರ್ಮಪ್ರಿಯರಾಗಿದ್ದವರನ್ನೇ ನೇಮಿಸಿಕೊಂಡಿದ್ದವರಾಗಿದ್ದರು. ಪ್ರಜಾಕೋಟಿಯ ಕಲ್ಯಾಣವೇ ತಮ್ಮ ಜೀವನದ ಸಾರ್ಥಕತೆಯೆಂದು ಭಾವಿಸಿದ್ದರು. ಶಾಲಾ ಮಕ್ಕಳಲ್ಲಿ ಧರ್ಮದ ಬಗ್ಗೆ ಶ್ರದ್ಧೆ, ಭಕ್ತಿಗಳು ಬೆಳೆದು ಬರುವಂತೆ ಪಠ್ಯಪುಸ್ತಕಗಳಲ್ಲಿ ಎಲ್ಲ ಧರ್ಮಪುರುಷರನ್ನು ಕುರಿತು ಪಠ್ಯವಿಷಯವಿರುವಂತೆ ನೋಡಿಕೊಳ್ಳುತ್ತಿದ್ದರು. ಅವರದು ಶುಷ್ಕಧರ್ಮವಾದುದಲ್ಲ, ಸಮೃದ್ಧ ಪ್ರೀತಿ ಸಂವರ್ಧಕ ಪ್ರಜಾಧರ್ಮವಾಗಿತ್ತು. ಆದರೆ ಈಗ ಏನಾಗುತ್ತಿದೆ?

☆

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಆದಿ ಅನಾದಿಗಳೇನು ಇಲ್ಲದಂದು*
*ನಿರುಪಮ ಲಿಂಗದಲ್ಲಿ ಅನುಪಮ ಭಕ್ತಿ ಜನಿಸಿತ್ತು*
*ನೋಡು ಆ ಭಕ್ತಿಯ ಗರ್ಭದಲ್ಲಿ*
*ಸತ್ಯಶರಣನುದಯಿಸಿದನು*
*ಇದು ಕಾರಣ ಅನಾದಿ ಕೇವಲ ಮುಕ್ತನೆ ಶರಣನೆಂಬ*
*ವಾಕ್ಯ ಸತ್ಯ ಕಂಡಯ್ಯ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ*

ದೇಹಾತ್ಮರ ವರ್ತನೆಯೇನೂ ಉಂಟಾಗಿಲ್ಲದಾಗ ಉಪಮಿಸಬಾರದ ಮಹಾಲಿಂಗದಲ್ಲಿ ಚಿಚ್ಛಕ್ತಿಸ್ವರೂಪವಾದ ಶ್ರೀಗುರುನಾಥನೆಂಬ ಜನನಿಯ ಚಿದ್ಗರ್ಭದಲ್ಲಿ ಯಥಾರ್ಥವಾದ ಶಿವಶರಣನು ಉತ್ಪತ್ತ್ಯವಾದನು. ಇದು ನಿಮಿತ್ತಾರ್ಥ ಮೊದಲು ಬಚ್ಚ ಬರಿಯ ಮೋಕ್ಷ ಸ್ವರೂಪನೆ ಶಿವಶರಣನೆಂಬ ವಚನವು ಯಥಾರ್ಥ ಕಂಡಯ್ಯ ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೇ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

'ಲಕ್ಷಕ್ಕೊಬ್ಬ ಭಕ್ತ ಕೋಟಿಗೊಬ್ಬ ಶರಣ'
ಲೋಕರಂಗದೊಳಗೆ ಸುಳಿದಿಹರು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಸ್ಸೀಮ ಚೆಲುವನೆ ನಿರುಪಮಾನಂದನೆ
ನಿರುಪಾಧಿಕ ನಿತ್ಯ ಸತ್ಯನೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮರ್ತ್ಯಲೋಕಕೆ ಬಂದು ದಾಸೋಹ ನೀ ಬೆಳಗಿ
ಭಕ್ತಿಜ್ಞಾನಜ್ಯೋತಿಯನುರಿಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀಮಾಡುವ ಸೇವೆಯನಾರು ಬಲ್ಲರು ತಂದೆ
ನಿನ್ನ ಲೀಲೆಯ ಒಳಗನರಿವರು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಾಟಕವನಾಡಿಸಿದೆ ಅಣ್ಣಬಸವಣ್ಣನ
ನಾಡಿನೆಲ್ಲೆಡೆಗೆ ಸಂಚರಿಸಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬೇಡುವ ಜಂಗಮನೆನಿಸದೆ ನೀತಂದೆ
ನೀಡುವ ಜಂಗವನಾಗಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸೂತಪಾತಕಬಿಡದ ಕೋಪ ಕ್ರೋಧವ ಬಿಡದ
ಕಪಟವ ಬಿಡದವರ ನೀನೊಲ್ಲೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಾಡಿ ಬೇಡುವನಲ್ಲ ಹೊಗಳಿ ಬೇಡುವನಲ್ಲ
ಓದಿ ಬೇಡುವ ಜಂಗಮ ನೀನಲ್ಲ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಮನದಂತೆ ಮಂಗಳ ಮನಕೆ ಮನವೇ ಸಾಕ್ಷಿ'
ಅನ್ಯಸಾಕ್ಷಿಗೆ ಮನವ ಕೊಡಬೇಡ। ನೀನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀನುಡಿದುದೇ ಸಿದ್ಧಾಂತ ನಡೆದುದೇ ಶಿವಬಟ್ಟೆ
ನುಡಿದು ನಡೆದುದೇ ಕಲ್ಯಾಣ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ







## ಮಧುಬಿಂದು

-ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ಚಿಂತನೆಯನ್ನು ನೂರಾರು, ಸಾವಿರಾರು ವರ್ಷಗಳಿಂದ ಮಾಡಿ ಅನುಭವಿಸಿದವರು ಆ ಅನುಭಾವಿಗಳು, ಋಷಿಗಳು, ಭಗವಂತನನ್ನು ಎಷ್ಟು ಪ್ರೀತಿಸಿದರೋ ಅಷ್ಟೇ ಈ ಜಗತ್ತನ್ನೂ ಪ್ರೀತಿಸಿದರು. ಆದರೆ ನಾವು ಹೇಗೆ ಪ್ರೀತಿಸುತ್ತೇವೆ ಹಾಗೆ ಪ್ರೀತಿಸಲಿಲ್ಲ. ನಮ್ಮ ಪ್ರೇಮದ ಕಣ್ಣಿಗೆ ಈ ಜಗತ್ತಿನ ವಿಷಯಗಳೇ ಪರಮಾರ್ಥ. ಜ್ಞಾನಿಗಳ ದೃಷ್ಟಿಯಲ್ಲಿ ವಿಷಯಗಳೆಲ್ಲಾ ಭಗವತ್ ಪ್ರಸಾದ! ವಿಷಯಗಳನ್ನು ಕಂಡು ಸಂತೋಷಿಸಿದವರು ಜ್ಞಾನಿಗಳು. ವಿಷಯಗಳನ್ನು ಕಂಡು ಮೋಹಿಸಿದವರು ನಾವುಗಳು. ಜ್ಞಾನಿಗಳು ಭಗವಂತನಿಗಾಗಿಯೇ ಬದುಕಿದವರು. ಈ ಕಾಣುವ ಜಗತ್ತನ್ನು ಈ ದೇಹ ಇಂದ್ರಿಯಗಳನ್ನು ಎಲ್ಲೆಡೆ ಹರವಿಕೊಂಡಿರುವ ಈ ವಿಷಯಗಳನ್ನು ತಿರಸ್ಕರಿಸಿದರು ಎಂದು ಅವರನ್ನು ನಾವು ತಪ್ಪಾಗಿ ತಿಳಿದುಕೊಂಡಿದ್ದೇವೆ. ಅವರು ತಿರಸ್ಕರಿಸಿದವರಲ್ಲ, ಪ್ರಸಾದೀಕರಿಸಿದವರು. ಅವರು ಜಗತ್ತನ್ನು ವರ್ಣಿಸುತ್ತಾರೆ; ಆ ವರ್ಣನೆ ಕೇಳಿದರೆ, ಭಗವತ್ ಭಾವ ಉಂಟಾಗುತ್ತದೆ. ವಿಷಯಗಳ ಅನುರಾಗ ಉಂಟಾಗುವುದಿಲ್ಲ. ಆದರೆ ನಾವು ವಿಷಯಗಳನ್ನು ವರ್ಣಿಸಿದರೆ ಭಗವತ್ ಪ್ರಜ್ಞೆ ಮರೆಯಾಗುತ್ತದೆ. ವಿಷಯಗಳಲ್ಲಿ ಅನುರಾಗ, ಮೋಹ ಉಂಟಾಗುತ್ತದೆ. ಅವರ ವರ್ಣನೆ, ಪ್ರಾಸಾದಿಕ; ನಮ್ಮ ವರ್ಣನೆ ಉನ್ಮಾದಕ! ಕಾರಣವಿಷ್ಟೇ, ಅವರು ದೇವ ದೃಷ್ಟಿಯಿಂದ ನೋಡಿದರು; ನಾವು ಆಶಾ ದೃಷ್ಟಿಯಿಂದ ನೋಡಿದೆವು ವಿಷಯಗಳತ್ತ.

*ಇಯಂ ಪೃಥ್ವೀ ಸರ್ವೇಷಾಂ ಭೂತಾನಾಂ ಮಧುಃ*

ಈ ಜಗತ್ತು ಈ ಪೃಥ್ವಿ-ಜೇನು; ನಯನ ಮನೋಹರ. ಇಲ್ಲಿರುವ ಶಬ್ದ, ಸ್ಪರ್ಶ, ರೂಪ, ರಸ ಹಾಗೂ ಗಂಧಗಳು ಮಧು. ಅವೆಲ್ಲ ವೈವಿಧ್ಯಪೂರ್ಣ. ಸಾವಿರ ಸಾವಿರ ಬಗೆಯವು. ಅಷ್ಟೇ ರಸಪೂರ್ಣ, ಆಕರ್ಷಕ. ಒಮ್ಮೆ ಸವಿದರೆ ಮತ್ತೆ ಮತ್ತೆ ಸವಿವ ಆಸೆ ಉಂಟಾಗುತ್ತದೆ.

ಈ ಜಗತ್ತು ಮಧು-ಯಾರಿಗೆ? ಸರ್ವಭೂತಗಳಿಗೆ, ಜೀವಜಂತುಗಳಿಗೆ, ಎಲ್ಲರಿಗೂ ಪ್ರಿಯ, ಪ್ರಾಣಪ್ರಿಯ.

*ಅಸ್ಯೈ ಪೃಥಿವ್ಯೈ ಸರ್ವಾಣಿ ಭೂತಾನಿ ಮಧು*

ಜಗತ್ತು ಅಷ್ಟೇ ಮಧು ಎಂದಲ್ಲ. ಜಗತ್ತಿನೊಳಗಿರುವ ಜೀವ ಜಂತುಗಳೂ ಈ ಪೃಥ್ವಿಗೆ ಮಧು! ಪೃಥ್ವಿಗೆ ಶೋಭಾಯಮಾನ ಜೀವಿಗಳು. ಅವು ಪ್ರಿಯ. ಸಸ್ಯಗಳು ಇರಬೇಕು. ಮನುಷ್ಯ ಇರಬೇಕು. ಆಕಾಶದಲ್ಲಿ ಪಕ್ಷಿಗಳು ಹಾರುತ್ತ ಇರಬೇಕು. ನೀರಿನೊಳಗೆ ಮೀನುಗಳು ಈಜುತ್ತಾ ಇರಬೇಕು. ಭೂಮಂಡಲದ ತುಂಬೆಲ್ಲ ಜೀವ-ಜಂತುಗಳು ಓಡಾಡಿಕೊಂಡಿರಬೇಕೆಂದು ಬಯಸುತ್ತದೆ ಪೃಥ್ವಿ. ಅದಕ್ಕಾಗಿ ತಪಸ್ಸನ್ನು ಆಚರಿಸುತ್ತದೆ. ಇದನ್ನು ನಿರ್ಮಾಣ ಮಾಡುವುದಕ್ಕಾಗಿ

'ತಪಃ ತಪ್ಯತ'

ತಪಸ್ಸನ್ನು ಆಚರಿಸಿತು. ಹಿಂದೆ ಹಲವು ಕೋಟಿ ವರುಷಗಳ ಕಾಲ ಭೂಮಿಯೊಳಗೆ ಏನೂ ಇರಲಿಲ್ಲ. ಯಾವ ಜಂತುಗಳೂ ಇರಲಿಲ್ಲ. ಹಚ್ಚ ಹಸಿರಾದ ವನ-ಸಿರಿ ಇರಲಿಲ್ಲ. ಪುಷ್ಪಗಳಿರಲಿಲ್ಲ. ಫಲ ಇರಲಿಲ್ಲ, ಭೂಮಿ ತಪಸ್ಸನ್ನು ಆಚರಿಸಿತು ಕೋಟ್ಯಾವಧಿ ವರ್ಷ. ಭೂಮಿಯ ಪ್ರತಿ ಕಣ ಕಣ ಬಯಸುತ್ತಿತ್ತು-'ಜೀವ ಮಧುವನ್ನು ನಿರ್ಮಾಣ ಮಾಡಬೇಕು, ನನ್ನನ್ನು ನಾವು ಮಧುವಿನಿಂದ ಸಿಂಗರಿಸಿಕೊಳ್ಳಬೇಕು, ಜೀವ-ಜಂತುಗಳಿಂದ ಸಿಂಗರಿಸಿಕೊಳ್ಳಬೇಕು' ಎಂದು ವಿಜ್ಞಾನ ಇದನ್ನೇ ಹೇಳುತ್ತದೆ.

ನಾಲ್ಕು-ಐದುನೂರು ಕೋಟಿ ವರ್ಷಗಳ ಹಿಂದೆ ಆಕಾಶದಲ್ಲಿ ಮೂಡಿತು ಈ ಪೃಥ್ವಿ. ನೂರು ಕೋಟಿ ವರ್ಷಗಳ ಕಾಲ ಭೂಮಿ ತಪಸ್ಸನ್ನು ಆಚರಿಸಿತು. ಹೇಗೆ

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ಸಂಸ್ಕೃತಿಯನ್ನು ರೂಪಿಸುವ ಶಕ್ತಿಗಳಲ್ಲಿ ಪ್ರಬಲವಾದದ್ದು ಧರ್ಮ. - ಡಾ.ಎಚ್. ತಿಪ್ಪೇರುದ್ರಸ್ವಾಮಿ

ಭಗವಂತ 'ತದೈಕ್ಷತ ಬಹುಸ್ಯಾಂ ಪ್ರಜಾಯೇಯ' ಹಾಗೆ ಭೂಮಿ! ನಾನು ನೂರು ನೂರು ರೂಪವಾಗಬೇಕು, ನೂರು ನೂರು ರಸವಾಗಬೇಕು, ನೂರು ನೂರು ಧ್ವನಿಯಾಗಬೇಕು, ನೂರು ನೂರು ಗಂಧವಾಗಬೇಕೆಂದು ಪೃಥ್ವಿ ತಪಸನ್ನು ಆಚರಿಸಿತು. ನೂರು ಕೋಟಿ ವರ್ಷದ ನಂತರ ಮೊಟ್ಟ ಮೊದಲನೆಯ 'ಅಮೀಬಾ' ಸುಳಿಯಿತು. ಭೂಮಿ ಸಂತೋಷದಿಂದ ತುಳುಕಿತು. 'ಅಮೀಬಾ' ಸೂಕ್ಷ್ಮಾತಿಸೂಕ್ಷ್ಮ. ಅದಕ್ಕೆ ಕೋಟಿ ವರುಷಗಳ ಕಾವು ಕೊಟ್ಟಿತು, ಉಣಿಸಿತು, ತಿನಿಸಿತು. ಅದು ಬಿಸಿಲು ಗಾಳಿಗೆ ನಷ್ಟವಾಗದಂತೆ ಪೋಷಿಸಿತು. ಅಂಥ ಆ ಅಣುಜೀವ ಬೆಳೆದು ಮುಂದೆ ಭೂಮಂಡಲವನ್ನೇ ವ್ಯಾಪಿಸಿತು; ಭೂಮಿ ಹಸಿರಾಯ್ತು. ತೃಪ್ತವಾಯ್ತು! ಮಧುಮಯವಾಯ್ತು! ಭೂಮಿ ಎಲ್ಲ ಜೀವಿಗಳನ್ನು ಪ್ರೀತಿಸುತ್ತದೆ. ಎಲ್ಲ ಜೀವಿಗಳು ಭೂಮಿಯನ್ನು ಪ್ರೀತಿಸುತ್ತವೆ. ಈ ಇಬ್ಬರ ಪರಸ್ಪರ ಪ್ರೇಮದ ಮಧ್ಯದಲ್ಲಿ ಮಧುದರ್ಶನ! ಋಷಿಯ ದೃಷ್ಟಿಯಲ್ಲಿ ಎಲ್ಲವೂ ಪ್ರಿಯ. ಪರಮಪ್ರಿಯ. ನಾವು ಪ್ರೇಮ ಮಾಡುತ್ತೇವೆ. ಆದರೆ ಆ ಪ್ರೇಮ ಸೀಮಿತ; ಹೊಲಕ್ಕೆ, ಮನೆಗೆ, ಹೆಂಡತಿ ಮಕ್ಕಳಿಗೆ ಸೀಮಿತ. ಯಾಕೆ? ನಮ್ಮ ದೃಷ್ಟಿ ಬಹಳ ಸಂಕುಚಿತ. ನಮ್ಮ ಮನೆಯ ಸುತ್ತ ಒಂದು ಗಿಡ ಬೆಳೆಸಿದರೆ ಸಾಕು, ಅರಣ್ಯ ನಷ್ಟ ಆದರೂ ನಮಗೆ ಅದರ ಪರಿವೆ ಇರುವುದಿಲ್ಲ. ಹಾಗೆ ನಮ್ಮ ಭಾವ ಬೇರೆ. ಋಷಿಗಳ ಸಂತರ ಜ್ಞಾನಿಗಳ ಭಾವ ಹಾಗೂ ದರ್ಶನ ಬೇರೆ!

ಈ ಭೂಮಿಯನ್ನು ಮಧು ಎಂದು ನೋಡಬೇಕು. ಪ್ರೀತಿಸಬೇಕು. ಇದು ಪೌರ್ವಾತ್ಯ ಎಂದು ಪ್ರೀತಿಸುವುದಲ್ಲ. ಇದು ಪಾಶ್ಚಾತ್ಯ ಎಂದು ಪ್ರೀತಿಸುವುದಲ್ಲ. ಯಾವ ಸಾಗರಗಳೂ ಹಿಂದೂ ಅಲ್ಲ, ಕ್ರಿಶ್ಚಿಯನ್ ಅಲ್ಲ, ಮುಸ್ಲಿಂ ಅಲ್ಲ. ಸಾಗರಗಳು ಸಾಗರ! ಬೆಟ್ಟಗಳು ಬೆಟ್ಟ, ಭೂಮಂಡಲ ಭೂಮಂಡಲ! ಭಗವಂತನ ಅದ್ಭುತವಾದ ಮಧುಬಿಂದು!

**ಯಶ್ಚಾಯಾಂ ಅಸ್ಯಾಂ ಪೃಥಿವ್ಯಾಂ**

ಮಧುವಾಗಿರುವಂಥ ಈ ವಿಶ್ವದೊಳಗೆ ಕೇವಲ ಪೃಥ್ವಿ ಕಾಣಿಸಲಿಲ್ಲ. ಋಷಿಗೆ, ಜ್ಞಾನಿಗೆ, ಪೃಥ್ವಿಯ ಕಣ ಕಣದೊಳಗೆ 'ತೇಜೋಮಯಃ ಅಮೃತಮಯಃ ಪುರುಷಃ' ಅತ್ಯಂತ ತೇಜೋವಂತನಾದಂಥ ಕಾಲ ಸ್ಪರ್ಶ ಇಲ್ಲದ ಅಮೃತಮಯವಾದಂಥ ಪುರುಷ ತತ್ವ ಕಂಡಿತು. ಶರೀರದೊಳಗೆ ಅದೇ ತೇಜೋಮಯ, ಅದೇ ಅಮೃತಮಯ ಪುರುಷ! ಯಾವ ಪುರುಷ ಚೇತನ ಮಧು ಮೂಲದಲ್ಲಿ ಇತ್ತೋ ಅದೇ ಭವ್ಯ ಭಗವಂತ. ಈ ಭೂಮಂಡಲದಲ್ಲಿ ಹಾಗೆಯೇ ಈ ದೇಹದೊಳಗೆ ಮಧು ತತ್ವ! ವಿಶ್ವದೊಳಗಿರುವಂಥ ಮಧುವನ್ನು ಆಸ್ವಾದನ ಮಾಡುವವನು ವಿಶ್ವಗತ ಚೇತನ. ದೇಹದೊಳಗಿರುವಂಥ ಮಧುವನ್ನು ಆಸ್ವಾದನ ಮಾಡುವವನು ದೇಹಗತ ಚೇತನ! ವಿಶ್ವದೊಳಗಿರುವ ಮಧುವನ್ನು ಆಸ್ವಾದ ಮಾಡುವವ ಈಶ ಚೇತನ. ಶರೀರದೊಳಗಿರುವ ಮಧುವನ್ನು ಆಸ್ವಾದ ಮಾಡುವವ ಜೀವ ಚೇತನ. ಎಲ್ಲವನ್ನು ಮಧುವಾಗಿ ನೋಡಿದವ ದಾರ್ಶನಿಕ!

> Here is the heaven, where the country
> is big and population small ;
> where there is more supply of goods
> than the people use ;
> where the people love their lives
> more than fashions ;
> where peoples' armoury is empty and
> their granary is full ;
> where they enjoy the food and simple
> clothing;
> where they are satisfied with their families
> and they take delight in the
> small things of life ;
> where they can live as close neighbours,
> all those people who are of
> different race.

ಲಾವೋತ್ಸೆ ಈ ಭೌತಿಕ ಬದುಕನ್ನು ಸ್ವರ್ಗವನ್ನಾಗಿ ಚಿತ್ರಿಸಿದ. ಭೂಮಂಡಲ ಲಾವೋತ್ಸೆಗೆ ಸ್ವರ್ಗ. ಆತ ಸ್ವರ್ಗೀಯ ಬದುಕಿನ ವರ್ಣನೆ ಮಾಡುತ್ತಾನೆ. ರಾಜ್ಯ

ಜಗತ್ತಿನ ಸಂಸಾರಕ್ಕಾಗಿ ಕುದಿಯುತ್ತಾ ಯಾವ ಉದ್ಯೋಗವನ್ನೂ ಕೈಕೊಂಡರೂ ಅದು ಕಾಯಕವಾಗುತ್ತದೆ.
-ಡಾ. ಎಚ್. ತಿಪ್ಪೇರುದ್ರಸ್ವಾಮಿ.





ದೇಶ ಬಹು ದೊಡ್ಡದಾಗಿರಬೇಕು. ಆದರೆ ಜನ ಮಿತವಾಗಿರಬೇಕು. ನಾವು ಎಷ್ಟು ಬಳಸಿದರೂ ಕೂಡ ಕಡಿಮೆ ಬೀಳಬಾರದು. ಅಷ್ಟು ವಸ್ತುಗಳು ಇರಬೇಕು, ಜನ ಜೀವನವನ್ನು ಹೆಚ್ಚು ಪ್ರೀತಿಸುತ್ತಿರಬೇಕು. ಆಹಾರವನ್ನು ಸವಿಯುವಲ್ಲಿ ಸಂತೋಷಿಯಾಗಿರಬೇಕು. ಬಟ್ಟೆಯನ್ನು ನೇಯುವಲ್ಲಿ ಸ್ವರ್ಗೀಯ ಆನಂದ ಅನುಭವಿಸಬೇಕು! ಅಷ್ಟೇ ಅಲ್ಲ ತಮ್ಮ ಪಾಲಿಗೆ ಬಂದಿರುವ ಮನೆ, ಹೆಂಡತಿ, ಮಕ್ಕಳು, ಬಂಧು-ಬಾಂಧವರು, ಗೆಳೆಯರು, ಇವರ ಮಧ್ಯದಲ್ಲಿ ಆತನ ಹೃದಯ ಹರ್ಷ ನಿರ್ಭರವಾಗಬೇಕು. ತಾನು ಮಾಡುವ ಕಾರ್ಯ ದೈವೀಸಾಧನೆ ಎನಿಸಬೇಕು! ಕೊನೆಯದಾಗಿ, ಎಲ್ಲ ಜೀವರಲ್ಲಿ, ಮಾನವರಲ್ಲಿ ಸಮಪ್ರೇಮಿಯಾಗಿರಬೇಕು. ಇದು ಸ್ವರ್ಗ ಲಾವೋತ್ಸೇನ ಕಣ್ಣಿನಲ್ಲಿ. ಇಂತು ಈ ಭೂಮಂಡಲದ ಬದುಕು ಋಷಿಗೆ ಮಧು. ಲಾವೋತ್ಸೆಗೆ ಸ್ವರ್ಗ!

ಮಧು ವಿಶ್ವ! ಆದರೆ ತಿಳಿಯದ ಮನುಷ್ಯ ಮೇರೆ ಹಾಕಿದ. ದ್ವೇಷ ರಾಗಗಳ ಹುಳಿ ಸುರಿದ. ಭೇದ ದೃಷ್ಟಿ ಬೀರಿ ಎಲ್ಲ ಸೌಂದರ್ಯವನ್ನು ಮರೆ ಮಾಚಿದ. ಉಳಿದ ಜೀವಿಗಳನ್ನು ಹಿಂಸಿಸಿದ. ತನ್ನ ಕುಲವನ್ನು ಅತಿಗೊಳಿಸಿದ. ಬದುಕನ್ನೇ ಸಮಸ್ಯೆ ಮಾಡಿಕೊಂಡ. ದುಃಖ ಹೆಚ್ಚಿತು. ಭೂಮಿ ನರಕವಾಯಿತು ಅವನ ಮಟ್ಟಿಗೆ!

ಲಾವೋತ್ಸೇನ ಭೂಸ್ವರ್ಗ ಚಿಂತನೀಯ! ದೇಶ ನಿಸ್ಸೀಮವಾಗಿರಬೇಕು; ಜನ ಕಡಿಮೆ ಇರಬೇಕು! ಹಾಲು ಹೈನು, ಹಣ್ಣು ಕಾಯಿ ಎಲ್ಲೆಡೆ ಧಾರಾಳವಾಗಿ ಲಭ್ಯವಿರಬೇಕು! ಧವಸ ಧಾನ್ಯಗಳಿಂದ ಕಣಜ ತುಂಬಿರಬೇಕು; ಆದರೆ ಶಸ್ತ್ರಾಸ್ತ್ರಗಳ ಆಗರ ಬರಿದಾಗಿರಬೇಕು! ಎಂಥ ಮಧುದರ್ಶನವಿದು! ದೇವರು ಮನುಷ್ಯನನ್ನು ಭೂಮಿಗೆ ಕಳಿಸುವಾಗ ಹಾಗಿತ್ತು! ಈತ ಬಂದ; ಆಸೆಯ ಭೂತದೊಂದಿಗೆ ನೆಲೆನಿಂತ. ಎಲ್ಲ ಹದಗೆಡಿಸಿದ!

ಈಗ ಮನುಷ್ಯ ಶಸ್ತ್ರಾಸ್ತ್ರಗಳ ಆಗರ ಹೆಚ್ಚಿಸಿದ. ಸರ್ವ ವಿನಾಶಕ ಅಸ್ತ್ರ ಸಹಸ್ರ ದುರಾಸೆ ಮನದಲ್ಲಿ. ಸ್ವರ್ಗದ ಕನಸು ಹೇಗೆ ನನಸಾದೀತು! ದೇವರ ಕಣಜ ಈ ಭೂಮಿ. ಒಂದು ಬೀಜ ಹಾಕಿ; ಲಕ್ಷ ಫಲ ಕೈವಶ! ಕಸ ಚೆಲ್ಲಿದರೆ ರಸವಾಗಿ ಕೈಗೆ! ಇಂಥ ಕಣಜ ಬರಿದಾಗಿಸಿದ. ವಿನಾಶಕ ಆಯುಧಗಳಿಂದ ತುಂಬಿದ!

ಮಾನವ ಇಲ್ಲಿ ಬಂದ ಬಳಿಕ ಪ್ರೀತಿಸಲು ಕಲಿಯಬೇಕಿತ್ತು. ವಿಷಯ ಲಾಲಸೆ ಹೆಚ್ಚಿಸಿಕೊಂಡ. ಕಾಮಾದಿಗಳಿಗೆ ಆದ್ಯ ಸ್ಥಾನವಿತ್ತ. ಸಾವಿರ ರಸಗಳು; ವಿವಿಧ ಆಹಾರ ವಸ್ತುಗಳು; ಸುಖವಾಗಿ ಅವುಗಳನ್ನು ದೇವಪ್ರಸಾದವೆಂದು ಭುಂಜಿಸಬೇಕಿತ್ತು. ಹಾಗೆ ಮಾಡಲಿಲ್ಲ. ಹಣ್ಣು ಹುಳಿಗೊಳಿಸಿ ಕುಡಿದ, ಕುಣಿದ, ಹುಚ್ಚನಾದ; ಉನ್ಮತ್ತನಾದ! ಆಪ್ಯಾಯಮಾನ ಆಹಾರ ಪದಾರ್ಥಗಳ ಕೆಡಿಸಿ ಸತ್ವಹೀನ ರೋಚಕಗಳ ಭುಂಜಿಸಿದ. ಪ್ರೀತಿಯವರ ಸಾದಾ ಆಹಾರ ತಿರಸ್ಕರಿಸಿ ವ್ಯಾಪಾರೀ ಖಾದ್ಯಗಳ ಮೋಹದಲಿ ಬಿದ್ದ. ತಾಯಿ ಹೃದಯದ ವ್ಯಕ್ತಿಗಳಿತ್ತ ಒಲವಿನ ಅಮೃತಾನ್ನವನ್ನು ಉದಾಸಿಸಿ ನಾಲಗೆಯ ರುಚಿಗೆ ಬಲಿಯಾದ!

ಲಾವೋತ್ಸೆ ಮುಂದುವರಿದು ಹೇಳುತ್ತಾನೆ. ದೇವರು ನಮಗೆ ಬೆಲೆಬಾಳುವ ವಸ್ತು ಹೊದಿಸಿ ಕಳಿಸಿದ. ಕೆಂಪು, ಕಪ್ಪು, ಹಳದಿ, ಬಿಳಿ! ಎಲ್ಲವೂ ಸುಂದರ. ತಾಳುವಂಥದು. ಸುಖಕಾರಿ, ಕಣ್ಣು ಕಿವಿ ಕೈ ಎಲ್ಲ ಅವನ ಕಾಣಿಕೆ. ಎಲ್ಲರಿಗೂ ಸಮನಾಗಿ. ರಾಜನ ಕಣ್ಣು, ಸಾಮಾನ್ಯನ ಕಣ್ಣು ಎಂದೇನಿಲ್ಲ! ಎಲ್ಲವೂ ಸಮರ್ಥ, ಸುಭಗ. ಈ ಬಣ್ಣ. ಈ ಇಂದ್ರಿಯಗಳನ್ನು ಈ ಅವಯವಗಳನ್ನು ಮನುಷ್ಯ ಪ್ರೀತಿಸಬೇಕು! ಆ ಅವಯವ ಗಳ ಬಗೆಗೆ ಹೆಮ್ಮೆ ಇರಬೇಕು. ಆಗ ಸ್ವರ್ಗ. ಬಸವಣ್ಣ ಕೂಡ 'ದೇಹವೇ ದೇಗುಲ, ಎನ್ನ ಕಾಲೇ ಕಂಬ' ಎಂದ. ಅವನ ದೃಷ್ಟಿಯಲ್ಲಿ ದೇಹವು ದೇವಾಲಯ. ಒಳಗೆ ದೇವರು! ಅಷ್ಟು ದಿವ್ಯ! ಅಷ್ಟು ಪವಿತ್ರ! ಇಂತು ಜ್ಞಾನಿಗಳಿಗೆ ವಿಶ್ವಮಧು! ಜೀವನ ಮಧು!

ನಮಗಿದು ಸ್ವರ್ಗವಲ್ಲ, ಮರ್ತ್ಯ, ನರಕ! ನಮ್ಮ ಅಜ್ಞಾನ, ನಮ್ಮ ಅತ್ಯಾಸೆ, ಸ್ವಾರ್ಥ ಎಲ್ಲ ಹಾನಿಗೂ ಕಾರಣ.

ಹೆಂಡತಿ, ಮಕ್ಕಳು, ಬಂಧು-ಬಾಂಧವರು ಸಂತೋಷ ಪಡುತ್ತಾರೆ; ತಮ್ಮ ಪ್ರೇಮ(ವರ್ಷ)ದಿಂದ ನಮ್ಮ ಬದುಕು ಮಧುರಗೊಳಿಸುತ್ತಾರೆ. ನಾವು ಅವರೊಂದಿಗೆ ತೃಪ್ತರಾಗಿರಬೇಕು. ನಾವಿರುವ ಮನೆ-ಕುಟೀರವೇ ಇರಲಿ, ಭವ್ಯ ಮಹಲೇ ಇರಲಿ; ಮಹಲಿನ ಮನುಷ್ಯ ಮಹಲನ್ನು ಪ್ರೀತಿಸಿದ ಹಾಗೆ, ಕುಟೀರದ ಮನುಷ್ಯ ಕುಟೀರವನ್ನು ಪ್ರೀತಿಸಬೇಕಾಗುತ್ತದೆ. ಆ ಪ್ರೇಮ

ವ್ಯಕ್ತಿಯು ತಾನು ದೊಡ್ಡವನಾದ ಹೊರತು ಯಾವ ದೊಡ್ಡದನ್ನು ಸಾಧಿಸಲಾರ. -ಡಾ. ಕೆ. ಅನಂತರಾಮು

ಮನೆ ಕಟ್ಟುತ್ತದೆ, ಕಲ್ಲು ಮಣ್ಣುಗಳಲ್ಲ.

ಒಂದು ಮನೆ, ಭವ್ಯ ಮನೆ. ಒಬ್ಬ ಶ್ರೀಮಂತ ಕಟ್ಟಿದ. ಐದು ಅಂತಸ್ತು. ವಿಶಾಲವಾದ ಮನೆ. ಮಾರ್ಬಲ್‌ನಲ್ಲಿ ನಿರ್ಮಾಣ ಮಾಡಿದ. ಅಂದು ವಾಸ್ತು ಶಾಂತಿ. ಮನೆಯನ್ನು ಪ್ರವೇಶಿಸಿದ. ಆ ಊರಲ್ಲಿ ಅಂತಹ ಮನೆ ಯಾರದೂ ಇರಲಿಲ್ಲ. ಅಷ್ಟು ಸುಂದರ ಭವ್ಯ ಮನೆ. ಆ ದಿನ ಹುಣ್ಣಿಮೆ. ಹಾಲು ಚೆಲ್ಲಿದ ಬೆಳದಿಂಗಳು. ಅರ್ಧ ರಾತ್ರಿ, ೭೦-೮೦ ವರ್ಷದ ಮುದುಕ. ಮಲಗಲಿಲ್ಲ. ಆನಂದವಾಗಿತ್ತು ಮನೆಯನ್ನು ನೋಡಿ. ಮೇಲೆ ಏರಿದ, ಐದನೇ ಅಂತಸ್ತಿನ ಮೇಲೆ ಹೋಗಿ ನಿಂತ. ಎಲ್ಲಾ ಕಡೆ ಬೆಳದಿಂಗಳಲ್ಲಿ ಊರು. ಆ ತಂಪಾದ ಬೆಳದಿಂಗಳೊಳಗೆ ಹಾಲುಗಲ್ಲಿನ ಮನೆ ಅಂದ ವಾಗಿ ಕಾಣುತ್ತಿತ್ತು. ಮುದುಕನಿಗೆ ಸ್ವರ್ಗ ಸಂತೋಷ ಹಾಗೆ ಅನುಭವಿಸುತ್ತಿರುವಾಗ ಆತನ ದೃಷ್ಟಿ ನೆರೆಮನೆಯತ್ತ ಹರಿಯಿತು. ತನ್ನ ಮನೆಯ ಮಗ್ಗುಲಲ್ಲೇ ಸಣ್ಣದೊಂದು ಕುಟೀರ. ಮೇಲೆಲ್ಲಾ ಚಪ್ಪರ ಹಾಕಿತ್ತು. ಮೇಲೆ ನಿಂತು ನೋಡಿದ. ಅವನಿಗೆ ಅನ್ನಿಸಿತ್ತು. ಆ ಕೆಳಗಿರುವ ಗುಡಿಸಲು ತನ್ನ ಮನೆಗೆ ಶೋಭೆ ಅಲ್ಲ ಎಂದು. ಐದು ಅಂತಸ್ತಿನ ಭವ್ಯ ಮನೆಗೆ ಇಂತಹ ಗುಡಿಸಲು ಕುಂದು, ಕಲಂಕ! ಎಂದ. ಆ ಭವ್ಯಮನೆಯ ಸಂತಸ ಶೂನ್ಯವಾಗಿತ್ತು. ಕೆಳಗಿಳಿದ. ಕುಟೀರದ ಯಜಮಾನಿ ವೃದ್ಧೆಯನ್ನು ಕರೆಸಿದ.

ಧಾನ್ಯ ತಂದು ಬೀಸಿ ಕೊಟ್ಟು ಬಂದುದರಲ್ಲಿ ಸಂತೋಷದಿಂದ ಬದುಕಿದವಳು. ಶ್ರೀಮಂತ ಹೇಳಿದ, 'ಇದು ನಿನ್ನ ಗುಡಿಸಲು ತಾನೆ? ನನ್ನ ಭವ್ಯ ಮನೆಯ ಕಳೆಯನ್ನೇ ಅದು ಕೆಡಿಸುತ್ತಲಿದೆ. ಅದನ್ನು ಕೆಡಿಸಿ ಬೇರೆ ಒಪ್ಪುವ ಕಟ್ಟಡ ಮಾಡಬೇಕಿದೆ. ಮಾರಾಟಕ್ಕೆ ಕೊಡು'.

ಮುದುಕಿ ಹೇಳಿತು, 'ಸಾಹುಕಾರ್ರೇ, ಈ ಮನೆ ಮಾರಾಟಕ್ಕೆ ಇಲ್ಲ. ನೀವು ಬೇಕಾದಷ್ಟು ಹಣ ಕೊಟ್ಟರೂ ಈ ಸ್ಥಾನ ನಿಮಗೆ ದೊರೆಯುವುದಿಲ್ಲ. ನೀವು ಲಕ್ಷ, ಹತ್ತು ಲಕ್ಷ ಕೋಟಿ ಕೊಟ್ಟರೂ ಸರಿ, ಆಗುವುದಿಲ್ಲ. ಆದ್ದರಿಂದ ತಾವು ಈ ಪ್ರಯತ್ನವನ್ನು ಬಿಟ್ಟುಬಿಡಿ. ಈ ಕುಟೀರದಲ್ಲಿ ನಿಮ್ಮ ಮಹಲಿನಲ್ಲಿರುವ ಅಮೌಲ್ಯ ಸಿರಿ ಇದೆ. ಇಲ್ಲಿ ನನ್ನ ಪತಿಯ ಪ್ರೇಮ ಹರಿದಿದೆ. ಆತ ದೇಹ ಬಿಟ್ಟು ದಶಕಗಳೇ ಕಳೆದಿವೆ. ಆದರೆ ಆ ಪ್ರೇಮ ಇಲ್ಲಿ ಶಾಶ್ವತ. ಈ ಗುಡಿಸಲು ನನ್ನ ದೃಷ್ಟಿಯಲ್ಲಿ ಅಮೌಲ್ಯ! ಇಂದ್ರ ಭವನ! ದೇವ ನಿಲಯ! ಗುಡಿಸಲಿಗೆ ಬೆಲೆ ಇಲ್ಲ. ಗುಡಿಸಲು ಕಟ್ಟಿದ ಭೂಮಿಗೆ ಬೆಲೆ ಇಲ್ಲ. ಆದರೆ ಗುಡಿಸಲಲ್ಲಿ ತುಂಬಿರುವ ಪ್ರೇಮಕ್ಕೆ ಬೆಲೆ ಇದೆ. ಸಾವುಕಾರ್ರೇ, ಆ ಪ್ರೇಮಕ್ಕೆ ನಿಮ್ಮ ಎಲ್ಲ ಸಂಪತ್ತೂ ಒಂದು ಕವಡೆ. ಇನ್ನೊಂದು ಮಾತು ಸಾಹುಕಾರರೇ, ಇಂತಹ ಮನೆಯನ್ನು ಕಟ್ಟಿದ್ದೀರಿ ನೀವು. ಇದು ಮಾರ್ಬಲ್ ಮನೆ, ನನ್ನದು ಸಣ್ಣ ಗುಡಿಸಲು. ಅಂತಹ ಗುಡಿಸಲಿನಲ್ಲಿ ನಾನು ಎಷ್ಟು ಆನಂದವಾಗಿ ಬಾಳಿ ಬದುಕಿದ್ದೇನೆ! ನಿಮಗೆ ಇಂತಹ ಮನೆಯೊಳಗೆ ಬಾಳಿ ಬದುಕುವುದಕ್ಕೆ ಬರುತ್ತಿಲ್ಲವಲ್ಲ?

ನಮ್ಮದು ಮಹಲು ೧೦೧ ಅಂತಸ್ತು, ಆದರೆ ನಮ್ಮ ಹೃದಯ ಸಂತೋಷಪಡುವಷ್ಟು ದೊಡ್ಡದಿಲ್ಲ. ಸುಸಂಸ್ಕೃತ ಅಲ್ಲ. ಏನು ಇದೆ ಮನೆಯೊಳಗೆ ಅದನ್ನು ಅನುಭವಿಸಿ, ಅನುಭವಿಸಿ ಸಂತೋಷಪಡುವಂಥಾ ದೃಷ್ಟಿ ಬರಬೇಕು. ಆ ದೃಷ್ಟಿ ಬಂತು ಅಂದರೆ ಈ ಭೂಮಂಡಲವೇ ಸ್ವರ್ಗ, ಆ ಬಳಿಕ ನಾವು ಹೇಗೆ ಬದುಕಬೇಕು ಎಂದರೆ ನಮ್ಮ ನೆರೆಹೊರೆಯವರು ಭಿನ್ನ ಭಿನ್ನ ಒಲವಿನವರಿರಬೇಕು! ಆದರೆ ಅವರೆಲ್ಲಾ ಹತ್ತಿರದವರಾಗಿರಬೇಕು!

ಒಂದು ಗಿಡದೊಳಗೆ ಎಲ್ಲಾ ಬಗೆಯ ಪಕ್ಷಿಗಳು. ಒಂದು ಸಣ್ಣದು, ಒಂದು ದೊಡ್ಡದು. ಒಂದು ಹಾಡುವುದು, ಒಂದು ಕುಣಿಯುವುದು. ಎಲ್ಲಕೂ ಗಿಡ ಆಶ್ರಯ. ಒಂದನ್ನೊಂದು ತಿರಸ್ಕರಿಸುವುದಿಲ್ಲ.

ಅರಣ್ಯದ ಮಧ್ಯ ಒಂದು ಮೊಲ. ಒಂದು ದಿವಸ ಭಗವಂತ ಕೇಳಿದ, 'ಮೊಲವೇ, ಪಾಪ! ನೀನು ನಿಷ್ಪಾಪಿ ಪ್ರಾಣಿ, ನಿನ್ನನ್ನು ತಿಂದು ಕ್ರೂರ ಪ್ರಾಣಿಗಳು ಬದುಕುತ್ತಿವೆ. ನಿನ್ನ ಪರಿಸ್ಥಿತಿ ನೋಡಿ ನನಗೆ ಕನಿಕರವೆನಿಸಿದೆ. ನಿನ್ನ ರಕ್ಷಿಸಿಕೊಳ್ಳಲು ಏನಾದರು ಬೇಕಿದ್ದರೆ ಕೇಳು, ಕೊಡುವೆ' ಎಂದ ಆಗ ಮೊಲ ಹೇಳಿತು, 'ಭಗವಂತನೆ, ಅವೆಲ್ಲ ಅಷ್ಟು ಶಸ್ತ್ರ ಇಟ್ಟುಕೊಂಡೂ ನಮ್ಮಷ್ಟು ದೊಡ್ಡ ಸಂಖ್ಯೆಯಲ್ಲಿ ಬದುಕಿಲ್ಲ. ನನ್ನ ಕೈಗೆ ಉಗುರಿಲ್ಲ, ತಲೆಯ ಮೇಲೆ ಶೃಂಗ ಇಲ್ಲ! ಆದರೆ ನನ್ನ ಕಾಲುಗಳಲ್ಲಿ ಶಕ್ತಿ ಇದೆ. ನನ್ನ ಮನಸ್ಸಿ

ಕಾವ್ಯವೇ ಭೂಮಿಯ ಮೇಲಿರುವ ನಂದನವನ. -ಆನಂದವರ್ಧನ.





ನಲ್ಲಿ ತೃಪ್ತಿ ಇದೆ. ನನ್ನ ದೇಹ ಇಷ್ಟು ವೇಗವಾಗಿ ಓಡಬಲ್ಲದು, ಅದು ನಮ್ಮ ವಂಶವನ್ನು ರಕ್ಷಿಸಿದೆ! ನನ್ನ ಬಗೆಗೆ ನನಗೆ ಸಂತೋಷವಿದೆ. ತೃಪ್ತಿ ಇದೆ. ನಿನ್ನ ವಸ್ತುವಿನ ಅವಶ್ಯಕತೆ ನನಗಿಲ್ಲ. ನಾನು ಈ ಹಿಂಸಾಪ್ರಾಣಿಗಳೊಂದಿಗೆ ಬದುಕಬೇಕು. ನಮಗೆ ಅಲ್ಲೇ ಸಂತೋಷ!'

ಅಂತಹ ಪ್ರಾಣಿಗಳೂ ಕೂಡ ಹೀಗೆ ಬಯಸುತ್ತವೆ. ಹಾವಿನಂಥ ಪ್ರಾಣಿಗಳು ಈ ಜಗತ್ತನ್ನು ಪ್ರೀತಿಸಿ ಎಲ್ಲ ಪ್ರಾಣಿಗಳೊಂದಿಗೆ ಬಾಳಿಕೊಂಡಿವೆ. ಅನವಶ್ಯವಾಗಿ ಆಕ್ರಮಿಸುವ ಕ್ರೌರ್ಯ ಅವುಗಳಲ್ಲಿಲ್ಲ. ನಾನು ನಾಸ್ತಿಕ. ನೀವು ಆಸ್ತಿಕ. ಅನೇಕ ಧರ್ಮಗಳು. ನಮ್ಮ ನಮ್ಮ ಧರ್ಮಗಳು ಕೂಡಿಬಾಳಲು ಕಲಿಸದೇ ಇದ್ದರೆ ಆ ಧರ್ಮ ಏಕೆ ? ಯಾವ ಪ್ರಯೋಜನಕ್ಕೆ?

ಒಬ್ಬ ಒಂದು ಧರ್ಮದವ, ಇನ್ನೊಬ್ಬ ಇನ್ನೊಂದು ಧರ್ಮದವ. ಧರ್ಮರಕ್ಷಣೆಗಾಗಿ ಭಯಂಕರವಾದ ಯುದ್ಧ ನಡೆಯಿತು. ಭೂಮಂಡಲ ಉರಿಯಿತು. ಲಕ್ಷಾಂತರ ಕೋಟ್ಯಂತರ ಪ್ರಾಣಿಗಳು ನಷ್ಟವಾದುವು. ಬಳಿಕ ಆ ಇಬ್ಬರೂ ಧಾರ್ಮಿಕ ಮುಖಂಡರು ಸ್ವರ್ಗಕ್ಕೆ ಹೋದರು. ಭಗವಂತನನ್ನು ಸಂಧಿಸಿದರು. 'ಇಲ್ಲಿ ಏಕೆ ಬಂದಿರಿ?' ಎಂದು ಕೇಳಿದ ದೇವರು. ಇಬ್ಬರು ಹೇಳತೊಡಗಿದರು. 'ಭಗವಾನ್, ನಿನಗಾಗಿ ಇಂತಹ ಭಯಂಕರ ಯುದ್ಧವನ್ನು ಮಾಡಿದೆ ನಾನು. ಪ್ರಾಣದ ಪರಿವೆ ಇರದೆ ನಿಮ್ಮ ರಕ್ಷಣೆಗಾಗಿ, ನಿಮ್ಮ ಧರ್ಮದ ರಕ್ಷಣೆಗಾಗಿ ಹೋರಾಡಿದೆ'. ಭಗವಂತ ಹೇಳಿದ, 'ನನಗಾಗಿ ನೀವು ಯುದ್ಧ ಮಾಡಿದಿರೋ? ಯಾವ ಜಗತ್ತನ್ನು ನಾನು ಕಷ್ಟಪಟ್ಟು ನಿರ್ಮಾಣ ಮಾಡಿದೆ ಆ ಸುಂದರ ಜಗತ್ತನ್ನೇ ವಿನಷ್ಟಗೊಳಿಸಿ ಬಂದಿರಲ್ಲ! ನಿಮ್ಮದು ಯಾವ ಧರ್ಮ ಅದು? ನನ್ನ ಸಾಮ್ರಾಜ್ಯವನ್ನು ನಷ್ಟಗೊಳಿಸಿ, ನನ್ನನ್ನು ರಕ್ಷಿಸುವಂಥಾ ಧರ್ಮ ಅದು ಯಾವುದು?'

ಭಗವಂತನು, ನಾವು ಕೂಡಿ ನಕ್ಕು ನಲಿದು ಇರುವುದನ್ನು ಬಯಸುತ್ತಾನೆಯೇ ವಿನಃ ನಾವು ಬಡಿದಾಡುವುದನ್ನಲ್ಲ. 'ಸಕಲ ಜೀವರಿಗೆ ಲೇಸ ಬಯಸುವ' ಎಂಬ ಬಸವಣ್ಣನ ಮಾತಿನಲ್ಲಿ ಸಕಲ ಎಂದರೆ ಯಾರು? ಕೇವಲ ಲಿಂಗಾಯತರೆ? 'ಸರ್ವೇ ಜನಾಃ ಸುಖಿನೋ ಭವಂತು' ಸರ್ವೇ ಜನವೆಂದರೆ ಯಾರು? ಕೇವಲ ಹಿಂದುಗಳೆ? 'ನೆರೆಯವರ ಪ್ರೀತಿಸು' ಎಂದ ಕ್ರಿಸ್ತ. ನೆರೆಯವರು ಯಾರು? ಕೇವಲ ಕ್ರಿಶ್ಚಿಯನ್ನರೆ? ಅಲ್ಲ. ಎಲ್ಲರೂ! ಆ ದೃಷ್ಟಿ ಇರಿಸಿದರೆ ಮಧು ದರ್ಶನ!

ಮಧುವನ್ನು ಈ ತನ್ನ ಆನಂದ ಸ್ವರೂಪದ ಬಿಂದುವಾಗಿ ಈ ಆಕಾಶದೊಳಗೆ ಚೆಲ್ಲಿದ ದೇವರು. ಅಂತಹ ಬಿಂದುವೇ ಭೂಮಂಡಲವಾಗಿ ಮಾರ್ಪಟ್ಟಿತು! ಈ ಜನತ್ತನ್ನು ಮಧು ಎಂದು ಪ್ರೀತಿಸುವುದು.

ಈ ಜಗತ್ತು ನಮ್ಮನ್ನು ಮಧು ಎಂದು ಅಪ್ಪಿಕೊಳ್ಳುವುದು. ಇದು ಭಗವಜ್ಜೀವನ! ಭಗವಚ್ಚಿಂತನೆಯಿಂದ ಇಂಥ ಬದುಕು ರೂಪುಗೊಳ್ಳಬೇಕು. ಈ ಸಮಗ್ರ ಪೃಥ್ವಿ ಮಧು. ಎಲ್ಲ ವ್ಯಕ್ತಿಗಳೂ ಅದೇ ಮಧು! ನಿಮ್ಮನ್ನು ಕಂಡರೆ ನನಗೆ ಸಂತೋಷ ಆಗುತ್ತಿದ್ದರೆ ನನಗೆ ನೀವು ಮಧು! ನನ್ನನ್ನು ಕಂಡು ನಿಮಗೆ ಸಂತೋಷ ಆಗುತ್ತಿದ್ದರೆ ನಿಮಗೆ ನಾನು ಮಧು! 'ಪರಸ್ಪರಂ ಭಾವಯಂತಃ ಶ್ರೇಯಃ ಪರಮಾಪ್ಸ್ಯಥ,' ಆವಾಗ ನನ್ನದೂ ನಿಮ್ಮದೂ ಶ್ರೇಯವಾಗುತ್ತದೆ! ಹೀಗೆ ಪರಸ್ಪರ ಶ್ರೇಯ ಉಂಟಾದಾಗ ಈ ಜಗತ್ತು ಸ್ವರ್ಗವಾಗುತ್ತದೆ! ಇನ್ನೊಂದು ಸ್ವರ್ಗಕ್ಕಾಗಿ ತವಕಿಸುವ ಪ್ರಶ್ನೆ ಬರುವುದಿಲ್ಲ. ಜೀವನವನ್ನು ಸ್ವರ್ಗೀಯ, ದಿವ್ಯಜೀವನವನ್ನಾಗಿ ಪರಿವರ್ತಿಸಿಕೊಳ್ಳುವುದು ಮನುಷ್ಯನ ಕೈಯೊಳಗಿದೆ! ಆದರೆ ಚಿಂತನೆಯ ಕೊರತೆಯಿಂದಾಗಿ ವಿಫಲನಾಗಿದ್ದಾನೆ.

ನಾವು ಶಬ್ದ ಕೇಳೋಣ, ರೂಪ ನೋಡೋಣ, ರಸವನ್ನು ಅನುಭವಿಸೋಣ, ಆದರೆ ಆ ಶಬ್ದ, ರಸ, ರೂಪ, ದಿವ್ಯ ಆಗಿರಬೇಕು! ಹೀಗೆ ದಿವ್ಯತೆಯನ್ನು ಪ್ರತಿ ವಿಷಯದಲ್ಲಿ ತುಂಬಿ ಆಸ್ವಾದನೆ ಮಾಡಿಕೊಂಡಿರುವುದು ಜ್ಞಾನಿಗಳಿಗೆ ಗೊತ್ತಾಗಿತ್ತು. ಆದ್ದರಿಂದ ಜ್ಞಾನಿಗಳು ಭಗವಂತನನ್ನು ಎಷ್ಟು ಪ್ರೀತಿಸಿದರೊ, ಅಷ್ಟೇ ಜಗತ್ತನ್ನು ಪ್ರೀತಿಸಿದರು. ನಾವು ತಪ್ಪು ತಿಳಿದುಕೊಂಡಿದ್ದೇವೆ. ಆಧ್ಯಾತ್ಮ ದಲ್ಲಿ ಪ್ರವೇಶ ಮಾಡಿದ ಬಳಿಕ ಜಗತ್ತೆಲ್ಲ ಹೇಯವಾಗಿ ಬಿಡುತ್ತದೆ ಎಂದು ಭಾವಿಸಿದ್ದೇವೆ. ಹಾಗಿಲ್ಲ. ಆಧ್ಯಾತ್ಮದಲ್ಲಿ ಹೆಜ್ಜೆ ಹಾಕಿದರೆ ಎಲ್ಲವೂ ದಿವ್ಯವಾಗಿ ಕಾಣುತ್ತದೆ. ನಮ್ಮ ಸುತ್ತಲಿನ ಮನೆ ಮಾರು, ಎಲ್ಲಾ ಕಡೆ ಭಗವಂತನ ಪ್ರಸಾದದ ಅವತರಣ ಉಂಟಾಗುತ್ತದೆ! ಇದು ಇಂದಿನ ಮಧು ಬಿಂದು. ಭಗವಚ್ಚಿಂತನ. ಅಂದರೆ ವಿಶ್ವ, ವಿಶ್ವದೊಳಗಿರುವ ಜೀವ, ಎರಡೂ ಮಧುಬಿಂದುಗಳು. ☆

ಆಚಾರವೇ ನಿಜವಾದ ಜಂಗಮ ವಿಚಾರವೇ ನಿಜವಾದ ಭಕ್ತ. -ಡಾ. ಬಸವರಾಜ ಸಬರದ.

# ಬಸವಭಕ್ತಿ

-ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳವರು *

*ಬಸವ ಬಾರೈ, ಮರ್ತ್ಯಲೋಕದೊಳಗೆ ಭಕ್ತರುಂಟೆ*
*ಹೇಳಯ್ಯಾ? ಮತ್ತಾರೂ ಇಲ್ಲಯ್ಯಾ, ಮತ್ತಾರೂ*
*ಇಲ್ಲಯ್ಯಾ, ಮತ್ತಾರೂ ಇಲ್ಲಯ್ಯಾ, ನಾನೊಬ್ಬನೇ ಭಕ್ತನು,*
*ಮರ್ತ್ಯಲೋಕದೊಳಗಣ ಭಕ್ತರೆಲ್ಲರೂ ಜಂಗಮಲಿಂಗ,*
*ನೀವೇ ಅಯ್ಯ ಕೂಡಲಸಂಗಮದೇವಾ*

ಶಿವನೊಡನೆ ಸಂಭಾಷಣೆ ಮಾಡುವ ರೀತಿಯ ನಾಟಕೀಯ ಗುಣಗಳನ್ನುಳ್ಳ ಈ ವಚನ ಬಸವಣ್ಣನವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ. ಶಿವನೇ ಬಸವಣ್ಣನವರನ್ನು ಕೇಳುತ್ತಾನೆ. ಈ ಮರ್ತ್ಯಲೋಕದೊಳಗೆ ಭಕ್ತರುಂಟೆ? ಎಂದು. ಅದಕ್ಕೆ ಬಸವಣ್ಣನವರು ಇಲ್ಲ, ಇಲ್ಲ, ಇಲ್ಲ ಎಂದು ಹೇಳುತ್ತಾರೆ. ಈ ಉತ್ತರದಿಂದ ಅದುವರೆಗೂ ತಾವು ಭಕ್ತರೆಂದು ಭಾವಿಸಿದ್ದವರಿಗೆ ಮಾತ್ರವಲ್ಲ, ಶಿವನಿಗೂ ಆಶ್ಚರ್ಯವಾಗಿರಬೇಕು. ಬಸವಣ್ಣನವರು ಮುಂದುವರಿದು ಹೇಳುತ್ತಾರೆ. 'ನಾನೊಬ್ಬನೇ ಭಕ್ತ' ಇದರಿಂದ ಶಿವ ಬೆರಗಾಗಿರಬೇಕು. ಉಳಿದ ಭಕ್ತರು ಬಸವಣ್ಣ ಎಂತಹ ಅಹಂಕಾರಿ ಎಂದುಕೊಂಡಿರಬೇಕು. ಆದರೆ ಬಸವಣ್ಣನವರು ಅಷ್ಟಕ್ಕೇ ನಿಲ್ಲದೆ 'ಮರ್ತ್ಯಲೋಕದೊಳಗಣ ಭಕ್ತರೆಲ್ಲರೂ ಜಂಗಮಲಿಂಗ ನೀವೇ ಅಯ್ಯಾ' ಎಂದು ತಮ್ಮ ಹಿರಿತನ ತೋರುತ್ತಾರೆ. ಈ ಹಿನ್ನಲೆಯಲ್ಲಿಯೇ ಅವರನ್ನು ಭಕ್ತಿಭಂಡಾರಿ, ಭಕ್ತಿಯ ಮೂಲ ಪುರುಷ ಎಂದು ಗುರುತಿಸಲಾಗಿದೆ.

ಬಸವಣ್ಣನವರ ಪೂರ್ವದಲ್ಲಿ ೬೩ ಜನ ಪುರಾತನರು ಪ್ರಖ್ಯಾತರಾಗಿದ್ದಾರೆ. ಅವರ ಭಕ್ತಿ ಅನುಪಮವಾದುದು. ಅಂತಹವರನ್ನು ಬಸವಣ್ಣನವರು ತುಂಬು ಗೌರವದಿಂದ ಮತ್ತೆ ಮತ್ತೆ ಸ್ಮರಿಸುತ್ತಾರೆ. ಸಾಮವೇದಿಗಳಂತೆ, ದಾಸ ದುಗ್ಗಳೆಯರಂತೆ, ಸಿರಿಯಾಳ ಚಂಗಳೆಯರಂತೆ, ಸಿಂಧು ಬಲ್ಲಾಳರಂತೆ ದೇವರನ್ನು ನಂಬಬೇಕು ಎನ್ನುತ್ತಾರೆ ಬಸವಣ್ಣನವರು. ಆದರೆ ಬಸವಣ್ಣನವರ ಭಕ್ತಿಗೂ ಪುರಾತನರ ಭಕ್ತಿಗೂ ಹೋಲಿಸಲು ಆಗುವುದಿಲ್ಲ. ಪುರಾತನರ ಭಕ್ತಿ ಮಾರ್ಗ ತುಂಬಾ ಭಯಾನಕವಾದುದು ಎಂದು ಬಸವಣ್ಣನವರೇ ಹೇಳುತ್ತಾರೆ;

*ಮುನ್ನಿನವರು ಹೋದ ದಾರಿ ಭಯ ಕಾಣಿರಣ್ಣಾ!*
*ಬಲ್ಲಾಳನ ವಧುವಿನೊಡನೆ ಸರಸವಾಡಿದಂದಿಂದ ಭಯ*
*ಕಾಣಿರಣ್ಣಾ! ಸಿರಿಯಾಳನ ಮಗನ ಬೇಡಿದಂದಿಂದ ಭಯ*
*ಕಾಣಿರಣ್ಣಾ !*
*ದಾಸನ ವಸ್ತ್ರವ ಸೀಳಿದಂದಿಂದ ಭಯ ಕಾಣಿರಣ್ಣಾ!*
*ಅಘಟಿತಘಟಿತರು ವಿಪರೀತ ಚರಿತರು*
*ಕೂಡಲಸಂಗನ ಶರಣರು ನಡೆದ ದಾರಿ ಭಯ*
*ಕಾಣಿರಣ್ಣಾ!*

ಶಿವ ಪುರಾತನ ಭಕ್ತರಿಂದ ಭಯಸಿದ್ದಾದರೂ ಏನನ್ನು? ಬಲ್ಲಾಳನ ಹೆಂಡತಿಯೊಡನೆ ಸರಸವಾಡ ಬಯಸಿದ, ಸಿರಿಯಾಳನ ಮಗನ ಮಾಂಸ ಬೇಡಿದ, ಭಕ್ತಿ ಗೌರವದಿಂದ ತಯಾರಿಸಿದ ದಾಸಿಮಯ್ಯನ ವಸ್ತ್ರವನ್ನು ಹರಿದು ಹಾಕಿದ. ಇದು ಭಕ್ತಿಯೇ? ಬಲ್ಲಾಳದೇವ ಶಿವನಿಗೆ ತನ್ನ ಹೆಂಡತಿಯನ್ನೇ ನೀಡಿ ಸಮತೆಯ ಪ್ರಸಾದ ಪಡೆದ, ಸಿರಿಯಾಳ ಮಗನನ್ನೇ ಕೊಂದು ಶಿವನಿಗೆ ಪ್ರಸಾದ ರೂಪದಲ್ಲಿ ಅರ್ಪಿಸಿ ಪ್ರಾಣ ಪ್ರಸಾದ ಪಡೆದ, ದಾಸಿಮಯ ತನ್ನ ವಸ್ತ್ರವನ್ನಿತ್ತು ಶಿವನಿಂದ ತವನಿಧಿಯನ್ನು ಪಡೆದ. ಈ ಶರಣರು ಶಿವನಲ್ಲಿಟ್ಟಿದ್ದ ನಿಷ್ಠೆ, ಭಕ್ತಿ ಅದ್ಭುತವಾದುದು. ಹಾಗೆಂದು ಇವರ ವಿಧಾನವನ್ನೇ ಮುಗ್ಧತೆಯಿಂದ ಮೂಢರಾಗಿ ಅನುಸರಿಸಿದರೆ ಇಂದಿನವರು ಜೈಲು ಸೇರಬೇಕಾಗುತ್ತದೆ. ಆದುದರಿಂದ ಪುರಾತನರು ನಡೆದ ದಾರಿ ಆದರ್ಶವಾದುದಾಗಲೀ, ಅನುಕರಣೀಯವಾದುದಾಗಲೀ, ಸಾಧುವಾಗಲೀ, ಸಾಧ್ಯವಾದುದಾಗಲೀ ಖಂಡಿತಾ ಅಲ್ಲ. ಬದಲಾಗಿ ಆ ಪುರಾತನರ ಭಕ್ತಿಯ ಹಿಂದಿರುವ ಭಾವ, ಮೋಹನಿರಸನ, ಶ್ರದ್ಧೆ, ನಿಷ್ಠೆಗಳನ್ನು ಮಾತ್ರ ಗ್ರಹಿಸಬೇಕು. ಬಸವಣ್ಣನವರದು ಪುರಾತನ ಶರಣರ ಭಕ್ತಿಗಿಂತ ವಿಭಿನ್ನವಾದ ಭಕ್ತಿಯೆಂಬುದನ್ನು ಪ್ರಭುದೇವರ ಈ ವಚನದಲ್ಲಿ ಕಾಣಬಹುದು.

*ಸಿರಿಯಾಳ-ಚಂಗಳೆಯರಂತೆ ಶಿಶುವಧೆಯ*
*ಮಾಡಿದವನಲ್ಲ ನಂಬಿ-ಬಲ್ಲಾಳರಂತೆ ಕಾಮುಕತನವ*
*ಮಾಡಿದವನಲ್ಲ. ಬೊಮ್ಮಯ್ಯ ಕಣ್ಣಪ್ಪನವರಂತೆ ಜೀವ*
*ಹಿಂಸೆಯ ಮಾಡಿದವನಲ್ಲ. ಗುಹೇಶ್ವರಾ ನಿಮ್ಮ*
*ಶರಣರಿಗಿಕ್ಕಿದ ತೊಡರು ಸಂಗನಬಸವಣ್ಣಾ!*

ಸಿರಿಯಾಳ-ಚಂಗಳೆ, ನಂಬಿ-ಬಲ್ಲಾಳ, ಬೊಮ್ಮಯ್ಯ-ಕಣ್ಣಪ್ಪನವರು ಪುರಾತನ ಕಾಲದ ಶೈವ ಶರಣರು. ಇಲ್ಲಿಯ ದೇವರು ಕೇವಲ ಭಕ್ತಿಪ್ರಿಯನಲ್ಲ. ಆತ ನರಭಕ್ಷಕ. ಹಾಗಾಗಿಯೇ ಸಿರಿಯಾಳ-ಚಂಗಳೆಯರ ಮಗನನ್ನು ಆಹಾರವಾಗಿ ಬೇಡಿದ್ದಾನೆ. ನರಭಕ್ಷಕನಷ್ಟೇ ಅಲ್ಲ, ಕಾಮುಕನೂ ಹೌದು. ಆದುದರಿಂದಲೇ ಸಿಂಧುಬಲ್ಲಾಳನ ವಧುವಿನ ಸಂಗ ಬಯಸಿದ್ದಾನೆ. ಹೀಗೆ 'ಶಿವ ಬೇಡಿದ್ದಾಗಲೀ, ಆ ಭಕ್ತರು ಕೊಟ್ಟಿದ್ದಾಗಲೀ ಅವಾಸ್ತವಿಕ ಮತ್ತು ಅವೈಜ್ಞಾನಿಕ. ಬಸವಣ್ಣ ಹೀಗೆ ಮಾಡಿ ಶಿವನನ್ನು ಒಲಿಸಿಕೊಂಡವನಲ್ಲ. ನಿಜಾರ್ಥದಲ್ಲಿ ಹೀಗೆ ಬೇಡುವವ ದೇವರಲ್ಲ. ಬೇಡಿದ ಎಂದು ಕೊಡುವವ ಭಕ್ತನೂ ಅಲ್ಲ, ಕೊಡುವುದು ಭಕ್ತಿಯೂ ಅಲ್ಲ.

ಬೇಡರ ಕಣ್ಣಪ್ಪನನ್ನೇ ತೆಗೆದುಕೊಳ್ಳಿ, ಆತ ಪ್ರಾಣಿಗಳನ್ನು ಕೊಂದು ತಿನ್ನುವ ಬೇಟೆಗಾರ. ತಾನು ಬೇಟೆಯಾಡುವಾಗ ಎಂದಾದರೊಮ್ಮೆ ಪುರೋಹಿತ ಬಂದು ಅಲ್ಲಿದ್ದ ಶಿವಲಿಂಗವನ್ನು ಪೂಜಿಸುವುದನ್ನು ಕಂಡು ತಾನೇ ಏಕೆ ನಿತ್ಯ ಪೂಜೆ ಮಾಡಬಾರದೆನ್ನಿಸುತ್ತದೆ ಅವನಿಗೆ. ಆತನಲ್ಲಿ ಪೂಜಾಪರಿಕರಗಳಿಲ್ಲ. ಬಾಯಲ್ಲಿ ನೀರು ತುಂಬಿಕೊಂಡು ಶಿವಲಿಂಗಕ್ಕೆ ಉಗುಳಿ 'ಅಭಿಷೇಕ' ಮಾಡುತ್ತಾನೆ. ಆಗ ತಾನೇ ಕೊಂದು ತಂದಿದ್ದ ಪ್ರಾಣಿಯ ಹಸಿ ಮಾಂಸವನ್ನೇ 'ನೈವೇದ್ಯ' ಮಾಡುತ್ತಾನೆ. ಅವನು ದೇವರ ಮೇಲೆ ನೀರು ಹಾಕಿದ್ದರಿಂದ ಮೊದಲೇ ಪುರೋಹಿತ ಲೇಪಿಸಿದ್ದ ಕುಂಕುಮ ನೀರಿನಲ್ಲಿ ಕರಗಿ ಶಿವನ ಕಣ್ಣುಗಳಿಂದ ಕೆಳಗಿಳಿದುದು ಆತನಿಗೆ ರಕ್ತದಂತೆ ಕಂಡಿರಬೇಕು. ಶಿವನ ಕಣ್ಣಲ್ಲಿ ರಕ್ತ ಬರುತ್ತದೆಯಲ್ಲಾ ಎಂದು ಮರುಗಿದ ಕಣ್ಣಪ್ಪ ಭಕ್ತಿಯ ಆವೇಶದಲ್ಲಿ ತನ್ನ ಕಣ್ಣನ್ನೇ ಬಗಿದು ಶಿವನಿಗೆ ಅಂಟಿಸಿದನಂತೆ. ಇಲ್ಲಿ ನಾವೆಲ್ಲಾ ಗಂಭೀರವಾಗಿ ಯೋಚಿಸಬೇಕಾಗಿದೆ. ಜೀವಂತ ಪ್ರಾಣಿಯನ್ನು ಕೊಲ್ಲುವಾಗ ಅದರ ಆಕ್ರಂದನ ಅವನ ಕಿವಿಗೆ ಕೇಳಲಿಲ್ಲವೆ? ಆ ಪ್ರಾಣಿಯಲ್ಲಿ ಅವನಿಗೆ ಶಿವ ಕಾಣಲಿಲ್ಲವೆ? ಆ ಪ್ರಾಣಿಯ ಚೀತ್ಕಾರದಲ್ಲಿ ಶಿವನ ದನಿಯನ್ನು ಅವನು ಗುರುತಿಸಲಾಗಲಿಲ್ಲವೆ? ಜಡವಾದ ಶಿಲೆಯಲ್ಲಿ ಶಿವನನ್ನು ಕಾಣುವವನು ಅದರ ಕಣ್ಣಲ್ಲಿ ರಕ್ತ ಬರುತ್ತದೆಂದು ಮರುಗುವವನು ಜೀವಂತ ಪ್ರಾಣಿಯನ್ನು ಕೊಲ್ಲುವಾಗ ಮರುಗಲಿಲ್ಲವೇಕೆ? ಅದಕ್ಕಾಗಿಯೇ ಬಸವಣ್ಣನವರು ಹೇಳಿದ್ದು;

*ದಯವಿಲ್ಲದ ಧರ್ಮವುದೇವುದಯ್ಯಾ*
*ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ*
*ದಯವೇ ಧರ್ಮದ ಮೂಲವಯ್ಯಾ*
*ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ*

ಧರ್ಮದ ಮೂಲ ಭಯ, ಹಿಂಸೆಯಲ್ಲ; ದಯೆ, ಪ್ರೀತಿಗಳು ಧರ್ಮದ ಮೂಲ. ದಯವಿಲ್ಲದ ಧರ್ಮಾಚರಣೆಯಿಂದ ಯಾವ ಸತ್ಫಲವೂ ದೊರೆಯದು. ಮಾನವರಲ್ಲಿ ಅಷ್ಟೇ ಅಲ್ಲ, ಸಕಲ ಪ್ರಾಣಿಗಳಲ್ಲಿಯೂ ದಯವಿರಬೇಕು. ಭಕ್ತಿಯ ಅಮಲಿನಲ್ಲಿ ಹಿಂಸಿಸುವುದು, ಕೊಲ್ಲುವುದು ಧರ್ಮವಲ್ಲ. ಇಂತಹುದನ್ನು ಭಗವಂತ ಕೂಡ ಮೆಚ್ಚುವುದಿಲ್ಲ. ಈ ದಿಸೆಯಲ್ಲಿ ಚಿಂತನೆ ಮಾಡಿದಾಗ ಬಸವಣ್ಣನವರ ಭಕ್ತಿಯ ವಿಧಾನ ಪುರಾತನ ಭಕ್ತಿ ಪರಂಪರೆಗಿಂತ ತೀರಾ ಭಿನ್ನವಾಗಿ ಕಾಣುತ್ತದೆ. ದೇವರಿಗೆ ಹೊರಗಿನ ವಸ್ತುಗಳ ಬದಲಾಗಿ ತನ್ನನ್ನೇ ಅರ್ಪಿಸಬೇಕೆಂಬುದು ಅವರ ಅಭಿಲಾಷೆ. ಬೇಡುವವ, ಕಾಡುವವ ದೇವರೇ ಅಲ್ಲ;

*ದಾಸನ ವಸ್ತ್ರವ ಬೇಡದ ಮುನ್ನ*

ಕವಿತೆ ಜೀವಕಾಮ ಸ್ವರದ ಮಾತಲ್ಲ, ಆತ್ಮಕಾಮಸ್ವರದ ಮಾತು. -ಪುತಿನ.

ಮನಸ್ಸು ಕಟ್ಟುವ ಕೆಲಸವನ್ನು ಕನ್ನಡದ ವಚನ ಸಾಹಿತ್ಯದಲ್ಲಿ ಹನ್ನೆರಡನೇ ಶತಮಾನದ ವಚನಕಾರರ ಬದುಕಿನಲ್ಲಿ ಕಾಣಬಹುದಾಗಿದೆ. - ಡಾ. ಬಸವರಾಜ ಸಬರದ

* ಪಟ್ಟಾಧ್ಯಕ್ಷರು, ಶ್ರೀಮಠ ಸಾಣೇಹಳ್ಳಿ, ಶ್ರೀ ತರಳಬಾಳು ಜಗದ್ಗುರು ಬೃಹನ್ಮಠ, ಸಿರಿಗೆರೆ.

*ತವನಿಧಿಯನಿತ್ತಡೆ ನಿಮ್ಮ ದೇವರೆಂಬೆ*
*ಸಿರಿಯಾಳನ ಮಗನ ಬೇಡದ ಮುನ್ನ*
*ಕಂಚಿಯ ಪುರವ ಕೈಲಾಸಕೊಯ್ದಡೆ ನಿಮ್ಮ ದೇವರೆಂಬೆ.*
*ಬಲ್ಲಾಳನ ವಧುವ ಬೇಡದ ಮುನ್ನ*
*ಸ್ವಯಲಿಂಗವ ಮಾಡಿದಡೆ ನಿಮ್ಮ ದೇವರೆಂಬೆ.*
*ದೇಹಿ ನೀನು, ವ್ಯಾಪಾರಿಗಳು ನಮ್ಮವರು!*
*ಬೇಡು, ಕೂಡಲಸಂಗಮದೇವಾ, ಎಮ್ಮವರ ಕೈಯಲು!*

ಬಸವಣ್ಣನವರು ದೇವರನ್ನು ಮೂದಲಿಸುವ ವಿಧಾನ ವಿನೂತನವಾಗಿದೆ. ನೀನು ಭಿಕ್ಷುಕನಂತೆ ದೇಹಿ ಎಂದು ಬೇಡಿದೆ. ಅವರು ವ್ಯಾಪಾರಿಗಳಂತೆ ನೀಡಿದರು. ದೇವರಿಗಿಂತ ಭಕ್ತರೇ ದೊಡ್ಡವರಾದಂತಾಯಿತು. ಭಕ್ತರನ್ನು ಯಾವುದಕ್ಕೂ ಕಾಡಿಬೇಡದೆ ಅವರಿಗೆ ಬೇಕಾದ ವರವನ್ನು ನೀನು ಕರುಣಿಸಿದ್ದರೆ ಆಗ ನಿಜವಾದ ದೇವರೆಂದು ನಿನ್ನನ್ನು ಗೌರವಿಸಿದ್ದೆ. ಭಕ್ತಿ ವ್ಯಾಪಾರವಾಗಬಾರದು. ಅದು 'ಮಾರ್ಜಾಲ ಕಿಶೋರ ನ್ಯಾಯ'ದಂತಿರಬೇಕು. ಅಂದರೆ ಬೆಕ್ಕು ಮತ್ತು ಅದರ ಮರಿ ಬೇರೆ ಬೇರೆಯಾಗಿರುತ್ತವೆ. ಎಲ್ಲೋ ಇದ್ದ ಮರಿ ತಾಯಿಯನ್ನು ನಂಬಿ ಮಿಯಾಂವ್, ಮಿಯಾಂವ್ ಎಂದು ಕೂಗುತ್ತದೆ. ಮರಿಯ ದನಿಯನ್ನು ಕೇಳಿದ ಬೆಕ್ಕು ತಾನೇ ಮರಿಯಿರುವಲ್ಲಿಗೆ ಹೋಗಿ ಹಾಲುಣಿಸುತ್ತದೆ. ಸುರಕ್ಷಿತ ಸ್ಥಳಕ್ಕೆ ಕೊಂಡೊಯ್ದು ಜೋಪಾನ ಮಾಡುತ್ತದೆ. ಈ ರೀತಿ ಭಕ್ತ–ಭಗವಂತನ ಸಂಬಂಧವಿರಬೇಕೇ ಹೊರತು ಅದೊಂದು ವ್ಯಾಪಾರವಾಗಬಾರದು ಎಂಬ ನಿಲುವು ಬಸವಣ್ಣನರದು. ಬಸವಣ್ಣನವರದು ಹೊರಗಿಟ್ಟು ಪೂಜಿಸುವ ಮುಗ್ಧಭಕ್ತಿಯಾಗಲಿ, ಮೂಢ ಭಕ್ತಿಯಾಗಲೀ ಅಲ್ಲ. ಅವರದು ಆಚಾರ–ವಿಚಾರಗಳ ಸಂಗಮ. ಹಾಗಾಗಿಯೇ ಪುರಾತನರ ಭಕ್ತಿಯನ್ನು ಮೆಚ್ಚಿ ವರ ಕೊಡುವ ಶಿವನನ್ನು ಮೂದಲಿಸುತ್ತಾರೆ.

*ನರ ಕೂರಂಬಿನಲೆಚ್ಚ, ಅವಗೊಲಿದೆಯಯ್ಯಾ.*
*ಅರಳಂಬಿನಲೆಚ್ಚ ಕಾಮನನುರುಹಿದೆಯಯ್ಯಾ*
*ಇರುಳು ಹಗಲೆನ್ನದೆ ಪ್ರಾಣಘಾತಕವ ಮಾಡಿದ*
*ಬೇಡನ ಕೈಲಾಸಕೊಯ್ದೆಯಯ್ಯಾ.*
*ಎನ್ನನೇತಕೊಲ್ಲೆ, ಕೂಡಲಸಂಗಮದೇವಾ?*

ಕಿರಾತನ ವೇಷಧರಿಸಿ ಬಂದ ನಿನ್ನ (ಶಿವ) ಮೇಲೆ ಅರ್ಜುನ ಬಾಣಗಳ ಮಳೆಗರೆದು ಗಾಯಗೊಳಿಸಿದ. ಅಂತಹವನಿಗೆ ಒಲಿದು ಪಾಶುಪತಾಸ್ತ್ರ ಕರುಣಿಸಿದೆ. ಧ್ಯಾನಸ್ಥನಾದ ನಿನ್ನ ಮೇಲೆ ಕುಸುಮ ಬಾಣವನ್ನು ಪ್ರಯೋಗಿಸಿದ ಮನ್ಮಥನನ್ನು ಸುಟ್ಟು ಬೂದಿ ಮಾಡಿದೆ. ಪ್ರತಿನಿತ್ಯ ಪ್ರಾಣಿ ಹಿಂಸೆ ಮಾಡುತ್ತಿದ್ದ ಕಣ್ಣಪ್ಪನ ಭಕ್ತಿಯನ್ನು ಮೆಚ್ಚಿ ನಿತ್ಯಮುಕ್ತಿಯನ್ನು ನೀಡಿದೆ. ನಾನು ಅವರಂತೆ ಹರಿತವಾದ ಬಾಣದಿಂದ ನಿನ್ನನ್ನು ಗಾಯಗೊಳಿಸಿಲ್ಲ, ತಪೋಭಂಗ ಮಾಡಿಲ್ಲ, ಹಿಂಸಾಮಾರ್ಗ ಹಿಡಿದಿಲ್ಲ, ಬದಲಾಗಿ ನೀನೇ ತಂದೆ–ತಾಯಿ–ಬಂಧು–ಬಳಗ ಸಕಲ ಸರ್ವಸ್ವ ಎಂದು ನಂಬಿ ಮನೆಯನ್ನು ಬಾಲ್ಯದಲ್ಲಿಯೇ ತೊರೆದು ನಿನ್ನ ಧ್ಯಾನದಲ್ಲಿರುವೆ. ಪುರಾತನರಿಗೆ ಒಲಿದು ವರವಿತ್ತ ನೀನು ನನಗೇಕೆ ಒಲಿಯುತ್ತಿಲ್ಲ ಎಂದು ಬಸವಣ್ಣನವರು ಕೇಳುವ ರೀತಿ ಹೃದಯಂಗಮವಾಗಿದೆ.

*ದಾಸನಂತೆ ತವನಿಧಿಯ ಬೇಡುವವನಲ್ಲ, ಚೋಳನಂತೆ*
*ಹೊನ್ನಮಳೆಯ ಕರೆಸೆಂಬುವನಲ್ಲ.*
*ಅಂಜದಿರು! ಅಳುಕದಿರು! ಅವರಂದದವ ನಾನಲ್ಲ!*
*ಎನ್ನ ತಂದೆ ಕೂಡಲಸಂಗಮದೇವಾ.*
*ಸದ್ಭಕ್ತಿಯನೇ ಕರುಣಿಸೆನಗೆ*

ನಾನು ಆಪುರಾತನರಂತೆ ಏನನ್ನಾದರೂ ಕೇಳುತ್ತೇನೆಂದು ಹೆದರಬೇಡ. ನಾನು ಬಯಸುವುದು ಸದ್ಭಕ್ತಿಯನ್ನು ಮಾತ್ರ, ಅದನ್ನು ಕರುಣಿಸು ಎಂದು ಅವರು ಕೇಳುತ್ತಾರೆ. ನಾನು ಆ ಪುರಾತನರಂತೆ ಯಾವುದನ್ನೂ ಕೊಡಲಾರೆ. ಕೊಡಲು ನನ್ನಲ್ಲಿ ಏನಿದೆ ಎಂದು ಅವರು ಕೇಳುವುದನ್ನು ನೋಡಿ;

*ತನು ನಿಮ್ಮದೆಂದ ಬಳಿಕ ಎನಗೆ ಬೇರೆ ತನುವಿಲ್ಲ*
*ಮನ ನಿಮ್ಮದೆಂದ ಬಳಿಕ ಎನಗೆ ಬೇರೆ ಮನವಿಲ್ಲ.*
*ಧನ ನಿಮ್ಮದೆಂದ ಬಳಿಕ ಎನಗೆ ಬೇರೆ ಧನವಿಲ್ಲ.*
*ಇಂತೀ ತ್ರಿವಿಧವು ನಿಮ್ಮದೆಂದ ಬಳಿಕ*
*ಎನಗೆ ಬೇರೆ ವಿಚಾರವುಂಟೇ, ಕೂಡಲಸಂಗಮದೇವಾ?*

**ಮಹಿಳೆಗೆ ಧಾರ್ಮಿಕ ಕ್ಷೇತ್ರದಲ್ಲಿ ಉನ್ನತ ಸ್ಥಾನ ಕಲ್ಪಿಸಿಕೊಟ್ಟವರಲ್ಲಿ ವಚನಕಾರರೇ ಮೊದಲಿಗರು.**
**-ಡಾ. ಬಸವರಾಜ ಸಬರದ.**





ನನ್ನ ತನು, ಮನ, ಧನಗಳೆಲ್ಲವೂ ನಿನಗೆ ಅರ್ಪಿತವಾಗಿವೆ. ಹೀಗಿರುವಾಗ ನಾನು ಹೊಸದಾಗಿ ನಿನಗೆ ಕೊಡುವಂತಹುದು ಇಲ್ಲವೇ ಇಲ್ಲ. ನಿನಗುಳಿದಿರುವ ದಾರಿಯೆಂದರೆ ನೀನಾಗಿಯೇ ನನ್ನ ಮೇಲೆ ಕರುಣೆದೋರಿ ಒಲಿಯುವುದು. ಇದು ಬಸವಣ್ಣನವರ ಭಕ್ತಿಯ ವಿಧಾನ. ವಿಷಯೋನ್ಮುಖವಾದ ಮನಸ್ಸನ್ನು ಭಗವದಭಿಮುಖವಾಗಿರಿಸಬೇಕು. ಆಗ ದೇವರು ಒಲಿಯುತ್ತಾನೆ. ಇದಕ್ಕೆ ಬೇಕಾದುದು ನಿರ್ಮಲ ಮನಸ್ಸು ಹಾಗೂ ದೇವರ ಬಗೆಗೆ ಅಚಲವಾದ ನಂಬುಗೆ. ಆದರೆ ಮನಸ್ಸು ನಿರ್ಮಲವಾಗುವುದು ತುಂಬಾ ಕಷ್ಟ. ಅದಕ್ಕಾಗಿಯೇ ಬಸವಣ್ಣನವರು 'ಸುಚಿತ್ತದಿಂದ ನಿಮ್ಮ ನೆನೆಯಲೊಲ್ಲದೆನ್ನ ಮನವು, ಎಂತಯ್ಯಾ? ಎನಗಿನ್ನಾವುದು ಗತಿ?' ಎಂದು ಪರಿತಪಿಸಿದ್ದಾರೆ. ಕೊನೆಗೆ ತಮ್ಮ ಆಚಾರ ವಿಚಾರಗಳಿಂದ ಮನದ ಮಾಲಿನ್ಯವನ್ನು ಕಳೆದುಕೊಂಡು ಭಕ್ತಿಭಂಡಾರಿಯಾಗುತ್ತಾರೆ. ಆದಾಗ್ಯೂ 'ಭಕ್ತಿಯಿಲ್ಲದ ಬಡವ ನಾನಯ್ಯಾ' ಎಂದು ವಿನಯದಿಂದ ಹೇಳುತ್ತಾರೆ.

ಆರೋಗ್ಯದ ಬಡತನದಿಂದ ಬಳಲುವವರನ್ನು ಕಂಡಿದ್ದೇವೆ. ಸಂಪತ್ತಿನ ಬಡತನದಿಂದ ಕೊರಗುವವರನ್ನು ನೋಡಿದ್ದೇವೆ. ಬಸವಣ್ಣನವರಂತೆ ಭಕ್ತಿಯಿಲ್ಲದ ಬಡವ ನಾನೆಂದು ಭಕ್ತಿಗಾಗಿ ಹಂಬಲಿಸುವವರನ್ನು ಕಾಣಲು ಸಾಧ್ಯವೆ? ಬಸವಣ್ಣನವರಂಥವರು ಇಲ್ಲವೇ ಇಲ್ಲ ಎಂದರೂ ತಪ್ಪಿಲ್ಲ. ವಾಸ್ತವವಾಗಿ ಬಸವಣ್ಣನವರು ಭಕ್ತಿಭಂಡಾರಿ ಎಂಬ ಬಿರುದು ಪಡೆದವರು. ಅವರು ಭಕ್ತಿಯ ಆಗರ. ಹೀಗಿದ್ದೊ ಭಕ್ತಿಯಿಲ್ಲದ ಬಡವ ಎಂದು ಹೇಳಿಕೊಳ್ಳುವುದು ಸರಿಯೇ ಎಂದರೆ ಬಸವಣ್ಣನವರೇ ಹೇಳುತ್ತಾರೆ;

*ಭಕ್ತಿಯಿಲ್ಲದ ಬಡವ ನಾನಯ್ಯಾ*
*ಕಕ್ಕಯ್ಯನ ಮನೆಯಲು ಬೇಡಿದೆ.*
*ಚೆನ್ನಯ್ಯನ ಮನೆಯಲು ಬೇಡಿದೆ.*
*ದಾಸಯ್ಯನ ಮನೆಯಲು ಬೇಡಿದೆ*
*ಎಲ್ಲಾ ಪುರಾತನರು ನೆರೆದು ಭಕ್ತಿಭಿಕ್ಷವನಿಕ್ಕಿದಡೆ*
*ಎನ್ನ ಪಾತ್ರೆ ತುಂಬಿತ್ತು, ಕೂಡಲಸಂಗಮದೇವಾ.*

'ಭಕ್ತಿಯಿಲ್ಲದ ಬಡವ ಎಂದು ಹೇಳಿಕೊಳ್ಳುತ್ತಿದ್ದರೂ ಅವರ ಭಕ್ತಿ ಶ್ರೀಮಂತಿಕೆಯನ್ನು ಇಲ್ಲಿ ಕಾಣಬಹುದು. ಕಕ್ಕಯ್ಯ, ಚೆನ್ನಯ್ಯ, ದಾಸಯ್ಯನವರುಗಳ ಮನೆಯ ಮುಂದೆ ನಿಂತು ಭಕ್ತಿಭಿಕ್ಷೆಯನ್ನು ಬೇಡಿದೆ. ಎಲ್ಲಾ ಪುರಾತನರು ನನ್ನ ಪಾತ್ರೆಗೆ ಭಕ್ತಿಯನ್ನು ತುಂಬಿದರು. ಅದರಿಂದ ನನ್ನ ಪಾತ್ರೆ ತುಂಬಿತು ಎನ್ನುತ್ತಾರೆ. ಅವರ ಭಕ್ತಿಸಾಧನೆಯ ರಹಸ್ಯ ಇಲ್ಲಿದೆ. ಅಹಂಕಾರವನ್ನಳಿದು ಸಮಷ್ಟಿಗೆ ತಮ್ಮನ್ನು ಅರ್ಪಿಸಿ ಕೊಂಡರು. ಮೇಲು ಕೀಳುಗಳನ್ನು ಬಿಟ್ಟು ಉದಾತ್ತ ವಾದುದರತ್ತ ಕೈಚಾಚಿದರು. ಅವರ ಕೈ ಕಲ್ಪವೃಕ್ಷವಾಯಿತು' (ಬಸವೇಶ್ವರರ ವಚನ ದೀಪಿಕೆ; ಡಾ. ಎ. ತಿಪ್ಪೇರುದ್ರಸ್ವಾಮಿ ಪುಟ. ೨೨೨)

ಪುರಾತನ ಶರಣರಿಗಿಂತ ತಾವೇನು ಭಕ್ತಿಯಲ್ಲಿ ಕಡಿಮೆಯಿಲ್ಲ ಎಂದು ಕೊಚ್ಚಿಕೊಳ್ಳುವವರಿಗೆ ಕೆಲವರಂತೂ ತಾವು ಮಹಾನ್ ಭಕ್ತರಂತೆ ತೋರಿಸಿಕೊಳ್ಳುತ್ತಾರೆ. ಅದಕ್ಕಾಗಿ ವಿಚಿತ್ರ ವೇಷ ಧರಿಸುತ್ತಾರೆ. ತಾವು ಮರಸುತ್ತಿ ಇತರರನ್ನೂ ಮರಸುತ್ತಲು ಹಚ್ಚುತ್ತಾರೆ. ನೀರಿನಲ್ಲಿ ಮುಳುಗಿ, ಬೇರೆಯವರನ್ನೂ ಮುಳುಗಿಸುತ್ತಾರೆ. ಬೇವಿನ ಉಡುಗೆ ತೊಡಿಸಿ ದಿಂಡುರುಳಿಸುತ್ತಾರೆ. ಹುತ್ತ ಪೂಜಿಸಿ ಅದನ್ನು ಸುತ್ತಿಸುತ್ತಾರೆ. ಗುಡಿ ಕಟ್ಟಿಸಲು ಬೆಳ್ಳಿ, ಬಂಗಾರ, ಹಸು ಮತ್ತಿತರ ವಸ್ತುಗಳನ್ನು ದಾನವೀಯಲು ಹೇಳುತ್ತಾರೆ, ಪ್ರಾಣಿಬಲಿ ಕೊಡಿಸುತ್ತಾರೆ. ಯಜ್ಞ–ಯಾಗವೆಂದು ತುಪ್ಪ, ಬಟ್ಟೆ, ದವಸ, ಗಂಧ ಮುಂತಾದುವುಗಳನ್ನು ಬೆಂಕಿಗೆ ತಾವೂ ಸುರಿದು ಇತರರೂ ಸುರಿಯುವಂತೆ ಮಾಡುತ್ತಾರೆ. ಇದೇ ಭಕ್ತಿ ಎಂಬ ಭ್ರಮೆ ಹುಟ್ಟಿಸಿ ಜನರ ಸುಲಿಗೆ ಮಾಡುತ್ತಾರೆ. ಇಂಥ ಕುರುಡು ನಂಬಿಕೆ, ಮೂಢಾಚರಣೆ ಭಕ್ತಿಯಲ್ಲ. ಇಂಥ ಭಕ್ತಿಗೆ ಭಗವಂತ ಒಲಿಯುವುದಿಲ್ಲ. ಭಕ್ತಿಯೆಂದರೆ ದೇವರ ಬಗೆಗೆ ನಾವಿಡುವ ಅಚಲ ನಂಬಿಕೆ ಮತ್ತು ಪ್ರೀತಿ. ಪರಮಪ್ರೇಮವೇ ಭಕ್ತಿ. ಬಸವಾದಿ ಶಿವಶರಣರು ಪರಮ ಪ್ರೇಮದ ಮಾರ್ಗದಲ್ಲಿ ಸಾಗಿ ದೈವೀ ಸಾಕ್ಷಾತ್ಕಾರ ಪಡೆದ ಪರಮಭಕ್ತರು.

ನಿಜವಾದ ಭಕ್ತ ಪ್ರಾಪಂಚಿಕ ವಸ್ತುಗಳಿಗಿಂತ ಮಿಗಿಲಾಗಿ ದೇವರನ್ನು ಪ್ರೀತಿಸುತ್ತಾನೆ. ಒಬ್ಬ ತನ್ನ ಸುಖಕ್ಕಾಗಿ ಪ್ರಾಪಂಚಿಕ ವಸ್ತುಗಳ ವ್ಯಾಮೋಹ ಹೊಂದಿ ಅವುಗಳನ್ನು ಪಡೆಯಲು ಪ್ರಯತ್ನಿಸುವಂತೆ ಪರಮಾತ್ಮನ ಮೇಲೆ ವ್ಯಾಮೋಹ ಹೊಂದಿ

**ಡಿವಿಜಿ ಯವರ ಕವಿ ಸಮಾಜ ಶಾಸಕ, ಕುವೆಂಪು ಅವರ ಕವಿ ಪೂರ್ಣದೃಷ್ಟಿಯ ದ್ರಷ್ಟಾರ.**
**ಪು.ತಿ.ನ ಅವರ ಕವಿ ಸ್ನೇಹಮಯ ಸಂತ. -ಡಾ.ಎ.ಎಸ್. ವೇಣುಗೋಪಾಲರಾವ್**

ಅವನನ್ನೇ ಬಿಗಿಯಾಗಿ ಹಿಡಿಯಬೇಕು. ಬಾಹ್ಯವಸ್ತುಗಳ ಮೇಲೆ ಇಟ್ಟಂಥ ಪ್ರೇಮವನ್ನು ಪರಮಾತ್ಮನ ಮೇಲಿಡುವುದೇ ನಿಜವಾದ ಭಕ್ತಿ. ಬಸವಣ್ಣನವರು ಇಂಥ ಭಕ್ತಿಯನ್ನು ಬೆಳೆಸಿ ಕೊಂಡಿದ್ದರು. ಆದರೆ ಇಂದು ಹೊನ್ನು, ಹೆಣ್ಣು, ಮಣ್ಣಿನ ದಾಸರಾಗಿ, ಅಧಿಕಾರ-ಕೀರ್ತಿಯ ಗುಲಾಮರಾಗಿ ಮನಸ್ಸನ್ನು ವಿಕಾರ ಮಾಡಿಕೊಳ್ಳುವವರೇ ಹೆಚ್ಚಾಗಿದ್ದಾರೆ. ವಿಷಯ ಪ್ರಪಂಚದ ಸೆಳೆತ ಅತಿಯಾಗಿ, ದೇವರ ಮೇಲಿನ ನೈಜ ಪ್ರೇಮ ಕಡಿಮೆಯಾಗುತ್ತಿದೆ. ಆದರೂ ಭಕ್ತಿಯ ಸಾಕಾರ ಮೂರ್ತಿಗಳಂತೆ ತೋರಿಸಿಕೊಳ್ಳುವ ಆತ್ಮವಂಚನೆ ಮಾತ್ರ ಕಡಿಮೆಯಾಗುತ್ತಿಲ್ಲ. ನಿಜವಾದ ಭಕ್ತನ ಭಕ್ತಿಯ ಪರಿಪೂರ್ಣ ಸ್ವರೂಪ ಹೇಗಿರಬೇಕೆಂಬುದನ್ನು ಬಸವಣ್ಣನವರು ತಮ್ಮ ಭಕ್ತಸ್ಥಲದ ಅಂತಿಮ ವಚನದಲ್ಲಿ ಹೇಳಿರುವುದು ಅರ್ಥಪೂರ್ಣವಾಗಿದೆ.

*ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ*
*ಲಿಂಗವೆಂಬ ಎಲೆಯಾಯಿತ್ತು, ಲಿಂಗವೆಂಬ ಎಲೆಯ*
*ಮೇಲೆ ವಿಚಾರವೆಂಬ ಹೂವಾಯಿತ್ತು. ಆಚಾರವೆಂಬ*
*ಕಾಯಾಯಿತ್ತು ನಿಷ್ಪತ್ತಿಯೆಂಬ ಹಣ್ಣಾಯಿತ್ತು.*
*ನಿಷ್ಪತ್ತಿಯೆಂಬ ಹಣ್ಣು ತೊಟ್ಟು ಕಳಚಿ ಬೀಳುವಲ್ಲಿ*
*ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ.*

'ಆಚಾರ ವಿಚಾರಗಳಿಂದ ಬೆಳೆದ ಭಕ್ತಿಯ ಪರಿಪೂರ್ಣ ಸ್ವರೂಪವನ್ನು ಇಲ್ಲಿ ಆಸ್ವಾದಿಸುತ್ತಿದ್ದಾರೆ ಬಸವಣ್ಣನವರು. ಶ್ರದ್ಧಾಭಕ್ತಿಯನ್ನು ಎಲ್ಲಾ ಬೆಳೆಗೂ ಆಧಾರಭೂತವಾದ ಭೂಮಿಗೆ ಹೋಲಿಸಿದ್ದಾರೆ. ಭಕ್ತಿಯೆಂಬುದು ಭೂಮಿ. ಇದರ ಮೇಲೆ ಗುರು ಎನ್ನುವ ಬೀಜ ಮೊಳಕೆಯೊಡೆದು ಲಿಂಗ ವೆಂಬ ಎಲೆಯಾಗುತ್ತದೆ. ಆ ಲಿಂಗವೆನ್ನುವ ಎಲೆ ದೈವತ್ವದ ಕಲ್ಪನೆ ಅರಳಿ ಬೆಳೆಯುವುದನ್ನು ಸೂಚಿಸುತ್ತದೆ. ಈ ದೈವತ್ವದ ಪರಿಕಲ್ಪನೆಯ ಮೇಲೆ ವಿಚಾರವೆಂಬ ಹೂವು ಅರಳುತ್ತದೆ. ಅಂದರೆ ಧರ್ಮದಲ್ಲಿ ವೈಚಾರಿಕ ವಿವೇಚನೆ ಅಗತ್ಯವೆಂಬು ದನ್ನು ಅವರಿಲ್ಲಿ ಹೇಳುತ್ತಿದ್ದಾರೆ. ವಿಚಾರವೊಂದೇ ಸಾಲದು, ಅದರ ಜೊತೆಗೆ ಆಚಾರವೂ ಬೆಳೆಯಬೇಕು. ಅದು ವಿಚಾರ ವನ್ನು ಸಾರ್ಥಕಗೊಳಿಸುವ ಮುಂದಿನ ಹೆಜ್ಜೆ. ಆದ್ದರಿಂದಲೇ ಅದನ್ನು ಆಚಾರವೆಂಬ ಕಾಯಾಯಿತ್ತು ಎಂದು ಹೇಳುತ್ತಾರೆ. ಹೂವು ಉದುರಿಹೋಗದೆ ಕಾಯಾಗಬೇಕಾದರೆ ಆಚಾರ ವಿಚಾರಗಳೆರಡೂ ಕೂಡಿ ಬೆಳೆಯಬೇಕು. ಬೆಳೆದ ಕಾಯಿ ಪೂರ್ಣಗೊಳ್ಳುವುದು ಅದು ಹಣ್ಣಾದಾಗ, ಅದೇ ನಿಷ್ಪತ್ತಿಯೆಂಬ ಹಣ್ಣು. ಇಲ್ಲಿ 'ನಿಷ್ಪತ್ತಿ' ಎಂಬ ಮಾತು ಬಹಳ ಅರ್ಥವತ್ತಾದದ್ದು. ಇಲ್ಲಿ ಅದನ್ನು ಮಾತಿಗೂ ಮೀರಿದ ಅನುಭಾವಿಕ ನಿಲುವು, ಲಿಂಗಾಂಗ ಸಾಮರಸ್ಯ, ಮುಕ್ತಿ ಎಂದು ಇಟ್ಟುಕೊಳ್ಳಬಹುದು. ಇಲ್ಲಿ ಭಕ್ತಿಸಾಧನೆ ಪಕ್ವವಾದ ಹಣ್ಣಾಗುತ್ತದೆ. ಆ ಹಣ್ಣು ಬೇರೆಯಾಗಿ ಉಳಿಯುವಂತಹುದಲ್ಲ ಲಿಂಗಸ್ವರೂಪವಾಗಿ ಅದರಲ್ಲಿಯೇ ಬೆರೆಯುವಂತಹದು. 'ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ' ಎಂಬ ಮಾತು ಬಹಳ ಸಮರ್ಥವಾಗಿ ಅದನ್ನು ಚಿತ್ರಿಸುತ್ತದೆ. ಇಡೀ ವಚನ ಸಾಧಕ ಜೀವನದ ಕೈಪಿಡಿಯಂತಿದ್ದು ಹೇಳಿ ಮುಗಿಸಲಾಗದ ಅರ್ಥವನ್ನು ಅನಾವರಣಗೊಳಿಸುತ್ತಾ ಸಾಧಕ ಬೆಳೆದ ಹಾಗೆ ತಾನೂ ಬೆಳೆಯುವ ಚಿರಂತನ ಚಲನಶೀಲ ಶಕ್ತಿಯನ್ನೂ ಪಡೆದಿದೆ.

☆

## ಬೆರಗು!

ಮಮತೆಯ ರಶ್ಮಿಯೊಂದು ಮಾನವ ರೂಪ ತಳೆದು,
ಜಗಕೆ ಬೆಳಕಾದ 'ವಿಶ್ವದೀಪ' ನೋಡಾ !
ವಚನಮುಕ್ತಕ ನೀಡಿ ನಯನಗಳ ತೆರೆಸಿ,
'ಮುತ್ತಿನದೀಪ'ವಾದ ಚೆಲುವು ನೋಡಾ!
ದಲಿತರಲಿ, ಸ್ತ್ರೀಯರಲಿ ಮಾನಸಿಕ ಬಲ ತುಂಬಿ,
'ರತ್ನದೀಪ'ವೆ ಆದ ಪರಿಯ ನೋಡಾ !
ಜಡಭರಿತ ಜಗದಲ್ಲಿ ಚೈತನ್ಯ ಪಲ್ಲವಿಸಿ,
'ಚೈತ್ರದೀಪ'ವಾದ ಬಗೆಯ ನೋಡಾ !
'ನಿಷ್ಕಾಮ ಕರ್ಮ, ಧರ್ಮದ ಮರ್ಮ' ಎನ್ನುತ್ತ
ತಾನೇ 'ಆಧ್ಯಾತ್ಮದೀಪ'ವಾದ ಅಚ್ಚರಿಯ ನೋಡಾ!
'ಸೋಹಂಭಾವ'ವನಳಿದು 'ದಾಸೋಹಂ' ಎನ್ನುತ್ತ
ಸಕಲರಿಗೆ 'ನಂದಾದೀಪ'ವಾದ ಬಗೆಯ ನೋಡಾ!
ಕಾಯಕವೇ ಕೈಲಾಸ, ಕ್ರಿಯಾಶೀಲತೆಯ ಉಲ್ಲಾಸ
ಎನುತ್ತ 'ಕಾಯಕದೀಪ'ವಾದ ಸೋಜಿಗವ ನೋಡಾ!
ನಡೆದಂತೆ ನುಡಿಯುತ್ತ, ನುಡಿದಂತೆ ನಡೆಯುತ್ತ,
ವಿಶ್ವಕ್ಕೆ ಕಣ್ಣಾದ 'ಬೆರಗು' ನೋಡಾ!

-ಪ್ರೊ.ಕೆ.ಆರ್. ಪ್ರೇಮಲೀಲಾ, ಮೈಸೂರು.

ಕಾವ್ಯದ ಕೆಲಸ ಮಾನವನ ಮೃಗತ್ವವನ್ನು ಕೆರಳಿಸುವುದಿಲ್ಲ. ಕೆರಳಿದ ಮನಸ್ಸನ್ನು ಸಂತೈಸುವುದು, ಸ್ನೇಹಮಯವಾಗಿಸುವುದು. - ಡಾ. ಎ.ಎಸ್. ವೇಣುಗೋಪಾಲನ್





# ಹಿರಿಯರಿಗೆ ನಾವು ಆಸರೆಯಾಗೋಣ

-ಯು.ಎನ್. ಸಂಗನಾಳಮಠ *

**ಕಾ**ಲಚಕ್ರದನುಸಾರ ಪ್ರತಿ ಮನುಷ್ಯ ವೃದ್ಧನಾಗಲೇ ಬೇಕು. ಆಗ ಕಿರಿಯರಾದವರು ಹಿರಿಯರ ಯೋಗಕ್ಷೇಮ ನೋಡಬೇಕಾಗುತ್ತದೆ. ಹಿರಿಯರು ನಮ್ಮನ್ನು ಪಾಲಿಸಿ ಪೋಷಿಸಿ ಬೆಳೆಸಿರುತ್ತಾರೆ. ಅವರು ಮಾಡಿದ ಉಪಕಾರಕ್ಕೆ ಈ ನಮ್ಮ ಸೇವೆ ಎಷ್ಟು ಸಮವಲ್ಲ. ಹಿರಿಯರನ್ನು ಪೋಷಿಸುವುದು ಎಲ್ಲರ ನೈತಿಕಹೊಣೆ ಮತ್ತು ಕರ್ತವ್ಯ. ಇದೊಂದು ಋಣ ತೀರಿಸುವ ವಿಧಾನ.

ವೃದ್ಧರಿಗೆ ಈ ವಯಸ್ಸಿನಲ್ಲಿ ಖಿನ್ನತೆ, ಒಂಟಿತನ, ದೈಹಿಕ ದುರ್ಬಲತೆ, ಅನಾರೋಗ್ಯ, ಅವಯವಗಳ ನಿಷ್ಕ್ರಿಯತೆ ಸಾಮಾನ್ಯ. ಬುದ್ಧಚರಿತದಲ್ಲಿ ವೃದ್ಧಾಪ್ಯದ ಬಗ್ಗೆ 'ಶೋಕದ ಉತ್ಪತ್ತಿ ಸ್ಥಾನ, ರತಿಶಕ್ತಿಯ ಹಂತಕಿ, ಸ್ಮರಣಶಕ್ತಿಯ ನಾಶಕಿ, ಇಂದ್ರಿಯಗಳ ಶತ್ರು' ಎಂದಿದ್ದಾರೆ.

ವೃದ್ಧರು ನಮ್ಮದು ಇನ್ನೇನಿದೆ ಎನ್ನುವರು. ಏನು ಮಾಡಬೇಕೆಂದು ಕೇಳಿದವರಿಗೆ ಮಾರ್ಗದರ್ಶಕರಾಗಬೇಕು. ಮನೆಯಲ್ಲಿ ಕುಟುಂಬದ ಸದಸ್ಯರು ಅವರಿಗೆ ನೀವು ಹೇಳಿದಮೇಲೆ ಇನ್ನೊಂದು ಮಾತಿಲ್ಲ ಎಂದಾಗ ಅವರು ತಮ್ಮ ಜೀವನ ಸಾರ್ಥಕವಾಯಿತು ಎಂದೆನ್ನುವರು. ಭಾರತೀಯ ಸಂಸ್ಕೃತಿಗೆ ವೃದ್ಧನೇ ಸೀಮಾಪುರುಷ, ವೃದ್ಧಳೇ ಸುಮಂಗಲದ ಮಾತೃತ್ವ. ವೃದ್ಧರ ಜೀವನದ ಅನುಭವಗಳನ್ನು ಕೇಳಬೇಕು. ಅವರ ಆಜ್ಞೆ ಪರಿಪಾಲಿಸಬೇಕು. ಆಶೀರ್ವಾದ ಹೊಂದಬೇಕು.

ತ್ರೇತಾಯುಗದ ಒಂದು ಕಥೆ ರಾಮಾಯಣದ ಜೀವಾಳ. ಶ್ರವಣನೆಂಬ ಯುವಕ ತನ್ನ ವೃದ್ಧ ಅಂಧ ತಾಯ್ತಂದೆಯವರನ್ನು ಹೆಗಲ ಮೇಲೆ ಕೂರಿಸಿಕೊಂಡು ತೀರ್ಥಯಾತ್ರೆಗೆ ಹೋಗಿದ್ದನು. ಯಾತ್ರೆಯ ಮಧ್ಯೆ ಶ್ರವಣನು ಒಂದೆಡೆ ವಿರಮಿಸುತ್ತಿದ್ದ ಸಂದರ್ಭದಲ್ಲಿ ತಂದೆ-ತಾಯಿಗಳ ನೀರಡಿಕೆಗೆ ಕೊಳದಲ್ಲಿ ನೀರು ತುಂಬುವ ಶಬ್ದ ಕೇಳಿದಾಗ, ಯಾವುದೋ ಪ್ರಾಣಿ ಎಂದು ಭ್ರಮಿಸಿದ ರಾಜಾ ದಶರಥನ ಬಾಣಕ್ಕೆ ಆಹುತಿಯಾಗುತ್ತಾನೆ ಶ್ರವಣ. ಪುತ್ರನ ವಿರಹದಿಂದ ನೊಂದ ಶ್ರವಣನ ಹೆತ್ತವರು ದಶರಥನ ಅಚಾತುರ್ಯಕ್ಕೆ ಶಾಪವಿತ್ತು ತಾವು ಅಲ್ಲಿಯೇ ಪ್ರಾಣ ತೆತ್ತರು. ಸದಾಕಾಲಕ್ಕೂ ಸರ್ವರಿಗೂ ಆದರ್ಶನೆನಿಸಿದವನು ಶ್ರವಣ. ಈಗ ಹೆತ್ತವರು ಭಾರವಾಗುತ್ತಿದ್ದಾರೆ. ಜೊತೆಯಲ್ಲಿಟ್ಟುಕೊಳ್ಳುವುದೂ ದುಸ್ತರವಾಗಿದೆ.

ಈಗ ವೃದ್ಧರನ್ನು ನಿರ್ಲಕ್ಷಿಸುವ ಕಾಲ ಬಂದಿದೆ. ಇವರ ಮಾತುಗಳನ್ನು ತಾತ್ಸಾರ ಮಾಡುತ್ತಾರೆ. ಈಗಿನ ವಿಭಕ್ತ ಕುಟುಂಬಗಳಲ್ಲಿ ವೃದ್ಧರನ್ನು ಪೋಷಿಸಲಾರದೇ ಸುಲಭವಾಗಿ ವೃದ್ಧಾಶ್ರಮಗಳಿಗೆ ಸೇರಿಸುತ್ತಾರೆ ಅಥವಾ ಅವರಿಗೆ ತೋರಿಸುವ ತಾತ್ಸಾರವನ್ನು ಕಂಡು ಅವರೇ ವೃದ್ಧಾಶ್ರಮ ಸೇರುತ್ತಾರೆ. ವೃದ್ಧರಿಗೆ ಸಂಗಾತಿ ಇಲ್ಲದಿದ್ದರೆ ಅವರ ಗೋಳನ್ನು ಕೇಳುವವರೇ ಇರುವುದಿಲ್ಲ.

ತಾನೇ ಸಂಪಾದಿಸಿದ ಆಸ್ತಿ-ಸಂಪತ್ತು-ಐಶ್ವರ್ಯಗಳನ್ನು ತನ್ನ ಮಕ್ಕಳೇ ತನ್ನವರೇ ಅಪಹರಿಸಿ ಹಾಕಿದ ಪಂಗನಾಮಕ್ಕೆ ತಾನೇ ಸಾಕ್ಷಿಯಾಗಿ ಬೀದಿ ಬದಿಯ ಪಾಲಾಗುವ ಅಥವಾ ಮೂಕರಾಗಿ ವೇದನೆ ಪಡುತ್ತ ದಿನಗಳನ್ನು ಎಣಿಸುತ್ತಿರುವ, ಸ್ವಂತ ಮಕ್ಕಳಿಂದಲೇ ಮನೆಯಿಂದ ಹೊರಹಾಕಿಸಿಕೊಂಡ, ತನ್ನದೇ ಸಂಪತ್ತಿಗಾಗಿ ತನ್ನವರೊಂದಿಗೆ ಜಗಳ ಮಾಡಿ ಕೋರ್ಟು ಕಛೇರಿ ಸುತ್ತುತ್ತ ಕೊನೆಗೆ ತುತ್ತು ಕೂಳಿಗೆ ಕೈಯೊಡ್ಡುವ ಅನೇಕ ಪ್ರಸಂಗಗಳನ್ನು ನೋಡುತ್ತಿದ್ದೇವೆ.

ಭಾರತದಲ್ಲಿ ಇಂದು ವೃದ್ಧಾಶ್ರಮಗಳು ಹೆಚ್ಚುತ್ತಿವೆ. ಒಳ್ಳೊಳ್ಳೆ ಕೆಲಸದಲ್ಲಿದ್ದು, ವಿದೇಶದಲ್ಲಿ ವಾಸಿಸಿದ್ದು, ಸಾಕಷ್ಟು

ಕಾವ್ಯಾನುಭವದಿಂದ ಗಾಢ ಪರಿಣಾಮದಿಂದ ಒದಗುವ ಆತ್ಮಸಂಸ್ಕಾರ ಸಾಮಾನ್ಯವಾದುದಲ್ಲ.
-ಡಾ.ಎ.ಎಸ್. ವೇಣುಗೋಪಾಲರಾವ್.

* ವಿಶ್ರಾಂತ ಉಪನ್ಯಾಸಕರು-ಲೇಖಕರು, ಹೊನ್ನಾಳಿ, ಶಿವಮೊಗ್ಗ ಜಿಲ್ಲೆ.

ಸಂಪಾದನೆಯಿದ್ದು ಎಷ್ಟೋ ಮಕ್ಕಳಿಗೆ ತಮ್ಮ ತಾಯ್ತಂದೆಯರನ್ನು ನೋಡಿಕೊಳ್ಳುವುದು ಮಾತ್ರ ಕಷ್ಟವೆನಿಸುತ್ತದೆ.

ಆಶ್ರಮವಾಸಿ ಹಿರಿಯರೊಬ್ಬರು ಹೇಳುತ್ತಾರೆ 'ನನ್ನ ಮಗ ವಿದೇಶದಲ್ಲಿದ್ದಾನೆ. ತುಂಬಾ ವರ್ಷಗಳಾದವು ಅವನಲ್ಲಿಗೆ ಹೋಗಿ. ಕೆಲಸಕ್ಕೆಂದು ಹೋದವನು ಮದುವೆಯಾಗಿ ಅಲ್ಲೇ ಉಳಿದುಬಿಟ್ಟ. ಅವನು ಅವನ ಹೆಂಡತಿ ಮಕ್ಕಳು ಅಲ್ಲಿನ ಪ್ರಜೆಗಳಾಗಿದ್ದಾರೆ. ನನ್ನನ್ನು ಅಲ್ಲಿಗೆ ಬನ್ನಿ ಎಂದು ಕರೆಯುತ್ತಿದ್ದಾರೆ. ನಾನು ಹೇಗೆ ಹೋಗಲಿ? ಪರದೇಶದ ಜೀವನ ಕ್ರಮಕ್ಕೆ ಈ ಪ್ರಾಯದಲ್ಲಿ ಹೇಗೆ ಹೊಂದಲಿ?'

ಒಂಟಿ ಬದುಕನ್ನು ಸವೆಸುತ್ತಿರುವ ಮಹಿಳೆ ಹೀಗೆ ಹೇಳುತ್ತಾರೆ– ಮಕ್ಕಳೆಲ್ಲ ಮದುವೆಯಾಗಿ ಬೇರೆ ಬೇರೆ ಊರಲ್ಲಿದ್ದಾರೆ. ಯಜಮಾನರು ತೀರಿಕೊಂಡ ನಂತರ ನಾಲ್ಕು ಮಕ್ಕಳು ಮೂರು ತಿಂಗಳಿಗೆ ಒಬ್ಬರ ಮನೆ ಎಂದು ಹಂಚಿ ಕೊಳ್ಳುವ ಮಾತನಾಡಿದರು. ಅದು ಬೇಡ ಎನಿಸಿ ಗಂಡ ಇದ್ದ ಮನೆಯಲ್ಲಿ ಹೇಗೋ ಇರುವೆ. ಕೈಕಾಲು ಗಟ್ಟಿ ಇರುವಷ್ಟು ಸಮಯ ಹೀಗೆ ಇರುವೆ. ಮತ್ತೆ ಹೇಗೋ ದೇವರು ಇದ್ದಾನೆ ಬಿಡಿ' ಎಂದರು.

ಮಕ್ಕಳ ಮೊಮ್ಮಕ್ಕಳ, ಬಂಧುಗಳ ಪ್ರೀತಿಯಿಂದ ವಂಚಿತರಾಗಿ ತಮ್ಮ ಕೊನೆಗಾಲವನ್ನು ದುಃಖದಿಂದ ಕಳೆಯುತ್ತಿದ್ದಾರೆ. ಕೆಲವು ವೃದ್ಧರು ಮನೆಯಲ್ಲಿದ್ದುಕೊಂಡು ಮಾನಸಿಕ ಹಿಂಸೆ ಅನುಭವಿಸುವ ಬದಲು, ಗುಡಿ ಆವರಣ, ದೇವಸ್ಥಾನ, ಸೂಫಿ ದರ್ಗಾಗಳಲ್ಲಿ, ಮಠಗಳಲ್ಲಿ ಆಶ್ರಯ ಪಡೆಯುತ್ತಾರೆ. ಕೆಲವು ತೀರ್ಥಕ್ಷೇತ್ರಗಳಲ್ಲಿ ಶ್ರೀಮಂತರು ಕಟ್ಟಿಸಿರುವ ವೃದ್ಧಾಶ್ರಮಗಳು ಶೋಚನೀಯ ಸ್ಥಿತಿಯಲ್ಲಿವೆ. ನೇಪಾಳದ ಕಾಟ್ಮಂಡುವಿನಲ್ಲಿ ಪಶುಪತಿ ದೇವಸ್ಥಾನದ ಮಗ್ಗುಲಲ್ಲಿ ಉರಿವ ಚಿತೆಗಳು ಕಾಣುತ್ತವೆ. ದೇಶದ ಕೆಲವು ಮಹಾನಗರಗಳಲ್ಲಿ ಹಿರಿಯ ನಾಗರೀಕರಿಗೆ ಅದರಲ್ಲೂ ಉಳ್ಳವರಿಗೆ ಸಕಲ ಸೌಕರ್ಯಗಳುಳ್ಳ ಅತ್ಯಾಧುನಿಕ ಅಪಾರ್ಟ್‌ಮೆಂಟುಗಳಿವೆ. ಇಂಥವರ ಮಕ್ಕಳು ನೌಕರಿಗಾಗಿ ಬೇರೆ ಬೇರೆ ದೇಶಗಳಲ್ಲಿರುತ್ತಾರೆ. ಮಕ್ಕಳನ್ನು ಓದಿಸಿ ವಿದೇಶಗಳಿಗೆ ಕಳಿಸಿ ಒಂಟಿ ಯಾಗಿ ಬದುಕುವ ವೃದ್ಧ ತಂದೆ–ತಾಯಿಗಳೂ ಇದ್ದಾರೆ. ವರ್ಷಕ್ಕೆ ಒಂದು ಸಲ ಮಕ್ಕಳು ಮೊಮ್ಮಕ್ಕಳು ಬಂದಾಗ ಅವರಿಗೆ ಹೊಸ ಮಿನುಗು. ಇಂಥವರು ಒಂದೊಂದು ಸಲ ಕಳ್ಳರಿಂದ ಜೀವದ ಅಭದ್ರತೆಗೆ ಕಾರಣರಾಗುವುದುಂಟು.

ನಮ್ಮ ಹಿರಿಯರನ್ನು, ಹೆತ್ತವರನ್ನು ಪ್ರಜ್ಞಾಪೂರ್ವಕ ವಾಗಿ ಸಲುಹಲು ಈ ವಿಷಯಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು.

೧. ತಂದೆ–ತಾಯಿಯ ಇಷ್ಟಾನಿಷ್ಟಗಳ ಬಗ್ಗೆ ಗಮನ ಕೊಟ್ಟು, ಅವರನ್ನು ಆಕ್ಷೇಪಿಸುವುದು ಅವಮಾನಿಸುವುದು ಉಪೇಕ್ಷಿ ಸುವುದು ಬೇಡ.

೨. ದುಡಿಯುವುದಕ್ಕೆ ವಿದೇಶಕ್ಕೆ ಹೋದರೂ ವೃದ್ಧ ತಂದೆ ತಾಯಿಗಳಿದ್ದರೆ ಅಲ್ಲಿಂದ ಮರಳಬೇಕು. ಹೆತ್ತವರಿಗೆ ಬೇಕಾಗಿರುವುದು ಪ್ರೀತಿ ಸಾಂಗತ್ಯವೇ ಹೊರತು ವಿದೇಶದಿಂದ ಕಳಿಸುವ ಹಣವಲ್ಲ.

೩. ಬದುಕಿನ ಸಂತೋಷ ದುಡ್ಡಿನಲ್ಲಿಲ್ಲ. ಹೆತ್ತವರ ಪ್ರೀತಿಯನ್ನು ಅನುಭವಿಸುವುದರಲ್ಲಿದೆ ಅವರ ಆರೋಗ್ಯ, ಆಹಾರ, ಸಂತಸ, ನಮ್ಮ ಆದ್ಯತೆಯಾಗಿರಬೇಕು. ಅಂದು ನಾವು ಅವರ ಮಕ್ಕಳು ಈಗ ಅವರು ನಮ್ಮ ಮಕ್ಕಳು ಎಂಬ ಭಾವನೆ ಬರಬೇಕು. ಅವರು ದೀರ್ಘ ದಾರಿಯಲ್ಲಿ ಸಾಗಿ ಬಂದಿರುತ್ತಾರೆ. ಅವರಿಗೆ ನಾವು ಆಸರೆಯಾಗಬೇಕೇ ಹೊರತು ನಾವು ಅವರನ್ನು ಬೇರೊಂದು ಆಸರೆಗೆ ತಳ್ಳುವುದು ನಮ್ಮ ಕರ್ತವ್ಯವಲ್ಲ.

ಬೇರಿಲ್ಲದೆ ಮರ ಬೆಳೆಯುವುದಿಲ್ಲ. ಫಲ ಕೊಡುವುದಿಲ್ಲ. ಅಂತೆಯೆ ವೃದ್ಧರು ಸುಸಂಸ್ಕೃತ ಸಮಾಜದ ಬೇರುಗಳು. ಅವರ ಬಗ್ಗೆ ಮರುಕ ಪಡದೆ ಗೌರವಿಸಬೇಕು. ಅವರ ಸೇವೆಗೆ ಸಂವೇದನಾಶೀಲರಾಗಬೇಕು. ವೃದ್ಧರೇ ಕಿರಿಯ ಆಚಾರ್ಯರು.

ವೃದ್ಧರ ಸಮಸ್ಯೆಗಳ ಬಗ್ಗೆ ಸಾರ್ವಜನಿಕರ ಗಮನ ಸೆಳೆಯಲು ಕುಟುಂಬ ಧಾರೆಯಲ್ಲಿ ಅವರನ್ನು ಸೇರಿಸುವುದು ಮತ್ತು ಸಾಮಾಜಿಕವಾಗಿ ಗೌರವಿಸುವುದು. ☆

ಭಾರತದಲ್ಲಂತೂ ಭಾವದಾಸ್ಯದಲ್ಲಿ ವಿಚಾರದಾಸ್ಯದಲ್ಲಿ ಪಾಶ್ಚಾತ್ಯರಿಗೆ ತಮ್ಮ ಆತ್ಮವನ್ನೇ ಮಾರಿಕೊಂಡಿರುವ 'ಸುಶಿಕ್ಷಿತ' ಜನರಿಗೇನೂ ಕಡಿಮೆಯಿಲ್ಲ. - ಡಾ. ಕೆ. ಕೃಷ್ಣಮೂರ್ತಿ





# ಅನುಭಾವಿ ಶರಣ ಹಡಪದ ಅಪ್ಪಣ್ಣ

–ಆರ್.ಎಸ್. ಚಾಪಗಾವಿ *

ಅನುಪಮ ಚೇತನ ಶರಣ ಹಡಪದ ಅಪ್ಪಣ್ಣನು ಮಹಾ ಅನುಭಾವಿಯಾಗಿದ್ದನು. ಲೌಕಿಕ ಜೀವನ ಹಾಗೂ ಪಾರಮಾರ್ಥಿಕ ಜೀವನ ಎರಡರಲ್ಲೂ ಅತ್ಯಂತ ಬುದ್ಧಿವಂತನಾಗಿದ್ದ ಅಪ್ಪಣ್ಣನನ್ನು 'ನಿಜಸುಖಿ ಅಪ್ಪಣ್ಣ' ಎಂದು ಶಿವಶರಣರು ಕರೆಯುತ್ತಿದ್ದರು. ಬಸವಣ್ಣನವರ ನಿಕಟವರ್ತಿಯೂ ಒಡನಾಡಿಯೂ ಆಗಿದ್ದ ಅಪ್ಪಣ್ಣ ಅವರ ಆಪ್ತ ಸಹಾಯಕನೂ ಆಗಿದ್ದನು. ಅವನ ಚರಿತ್ರೆಯ ಬಗ್ಗೆ ಹೆಚ್ಚಿನ ವಿವರಗಳು ಲಭ್ಯವಿರುವುದಿಲ್ಲ. ಅವನ ಹೆಂಡತಿಯ ಹೆಸರು ಲಿಂಗಮ್ಮ. ಮಹಾಶರಣೆಯೂ ಶ್ರೇಷ್ಠ ಅನುಭಾವಿಯೂ ಆಗಿದ್ದ ಅವಳನ್ನು 'ನಿಜಮುಕ್ತೆ ಲಿಂಗಮ್ಮ' ಎಂದು ಕರೆಯುತ್ತಿದ್ದರು.

ಹಡಪ ಎಂದರೆ ತಾಂಬೂಲದ ಚೀಲವೆಂದೂ ಕ್ಷೌರಿಕನ ಕೈಪೆಟ್ಟಿಗೆ ಎಂದೂ ಎರಡು ಅರ್ಥಗಳಿವೆ. ಅಪ್ಪಣ್ಣನ ಕಾಯಕ ಯಾವುದಾಗಿತ್ತೆಂಬುದರ ಬಗ್ಗೆ ವಿವರಗಳು ಲಭ್ಯವಿಲ್ಲ. ಅವನು ಬಸವಣ್ಣನವರ ಆಪ್ತಸಹಾಯಕನಾಗಿದ್ದುದು ತಿಳಿದು ಬರುತ್ತದೆ.

*'ಎನ್ನ ತನು ನಿಮ್ಮ ಸೇವೆಯಲ್ಲಿ ಸವೆದು*
*ಎನ್ನ ಮನ ನಿಮ್ಮ ನೆನಹಿನಲ್ಲಿ ಸವೆದು*
*ಎನ್ನ ಅರಿವು ನಿಮ್ಮ ಘನದೊಳಗೆ ಸವೆದು*
*ನಿಶ್ಚಲ ನಿಜೈಕ್ಯವಾಗಿ ಬಸವಪ್ರಿಯ ಕೂಡಲಸಂಗಯ್ಯಾ*
*ನಾನೀನೆಂಬುದು ಏನಾಯಿತ್ತೆಂದರಿಯೆ*

*ಎನ್ನ ಆಚಾರ ವಿಚಾರ ಬಸವಣ್ಣಂಗರ್ಪಿತವಾದವು*
*ಎನ್ನ ಅವಧಾನ–ಅನುಭಾವ ಬಸವಣ್ಣಂಗರ್ಪಿತವಾದವು*
*ಎನ್ನ ಸರ್ವಾಚಾರ ಸಂಪತ್ತು ಬಸವಣ್ಣನಲ್ಲಿ ವೇದ್ಯವಾಯಿತ್ತು*
*ಬಸವಪ್ರಿಯ ಕೂಡಲಚೆನ್ನಸಂಗಮ ದೇವರಲ್ಲಿ*
*ನಿಜನಿವಾಸಿಯಾಗಿರ್ದೆನು*

ಅಪ್ಪಣ್ಣನಿಗೆ ಬಸವಣ್ಣನವರ ಮೇಲೆ ಉತ್ಕಟ ಭಕ್ತಿ, ಪ್ರೇಮ, ನಿಷ್ಠೆ ಇದ್ದುದು ಈ ವಚನಗಳಿಂದ ತಿಳಿದು ಬರುತ್ತದೆ. 'ಬಸವಪ್ರಿಯ' ವಚನ ಮುದ್ರಿಕೆ ಹಾಗೂ 'ನಿಜನಿವಾಸಿ' ಈ ಆತ್ಮವಿಶ್ವಾಸದ ನುಡಿಗಳು ಗಮನಾರ್ಹವೆನಿಸುತ್ತವೆ. ಪ್ರಥಮಾಚಾರಿ ಭಕ್ತಿಭಂಡಾರಿ ಬಸವಣ್ಣನವರ ಸೇವಾವಕಾಶ ದೊರೆತಿದ್ದುದು ತನ್ನ ಪೂರ್ವಜನ್ಮದ ಪುಣ್ಯದ ಫಲವೆಂದು ತಿಳಿದು ಕಾಯಾ ವಾಚಾ ಮನಸಾ ನಿಷ್ಠೆ ಭಕ್ತಿಪ್ರೇಮ ಪೂರ್ವಕವಾಗಿ ಅವರ ಆಪ್ತಸೇವೆ ಮಾಡಿಕೊಂಡಿದ್ದನು. ಶರಣರ ಸಮೂಹದಲ್ಲಿ ಅಪ್ಪಣ್ಣ ಉನ್ನತ ಸ್ಥಾನಮಾನ ಹೊಂದಿದ್ದನು.

ಜ್ಞಾನನಿಧಿ ಅಲ್ಲಮಪ್ರಭು ಮತ್ತು ಶಿವಯೋಗಿ ಸಿದ್ಧರಾಮರು ಬಸವಣ್ಣನವರನ್ನು ಕಾಣಲು ಕಲ್ಯಾಣಕ್ಕೆ ಬಂದ ಪ್ರಸಂಗ ಶೂನ್ಯಸಂಪಾದನೆಯಲ್ಲಿ ಅತ್ಯಂತ ರೋಚಕವಾಗಿ ಬಂದಿದೆ. ಆ ಸಮಯದಲ್ಲಿ ಬಸವಣ್ಣನವರ ಆಪ್ತಕಾರ್ಯದರ್ಶಿಯಾಗಿದ್ದ ಹಡಪದ ಅಪ್ಪಣ್ಣನ ಪಾತ್ರ ಮಹತ್ವದ್ದಾಗಿತ್ತು. ಬಂದ ವ್ಯಕ್ತಿಗಳಿಬ್ಬರು ಅಸಾಮಾನ್ಯರೆಂದು ತಿಳಿದುಕೊಂಡ ಅಪ್ಪಣ್ಣನು ಆ ಮಹನೀಯರು ಬಂದ ಸೂಚನೆಯನ್ನು ಲಿಂಗಪೂಜೆಯಲ್ಲಿ ನಿರತನಾಗಿದ್ದ ಬಸವಣ್ಣನಿಗೆ ತಿಳಿಸುತ್ತಾನೆ.

*ಕಾಯವೇ ಭಕ್ತಪ್ರಾಣವೇ ಜಂಗಮ*
*ಆವುದು ಘನವೆಂಬೆ ಆವುದು ಕಿರಿದೆಂಬೆ*
*ಕೂಡಲಸಂಗನ ಶರಣರು ಬಂದರೆ ಉಪಚಾರಕ್ಕೆ ಇಂಬಿಲ್ಲ*
*ಕರುಣದಿಂ ಬರಹೇಳಾ ಅಪ್ಪಣ್ಣಾ*

'ಲಿಂಗಪೂಜೆಗೆ ಜಂಗಮಸೇವೆಗೂ ಭೇದವಿಲ್ಲ. ಲಿಂಗಪೂಜೆಯನ್ನು ಬಿಟ್ಟು ಬರುವುದು ಸರಿಯಲ್ಲ. ನೀನೇ ಅವರನ್ನು ಕರೆದುಕೊಂಡು ಬಾ' ಎಂದು ಬಸವಣ್ಣನವರು ತಿಳಿಸಲು ನಿಶಿತಮತಿಯೂ ಅನುಭಾವಿಯೂ ಆಗಿದ್ದ ಅಪ್ಪಣ್ಣ ಪರಿಸ್ಥಿತಿಯ ಸೂಕ್ಷ್ಮತೆ ತಿಳಿದು, ಬಂದ ಅತಿಥಿಗಳಿಗೆ ಜಾಣ್ಮೆಯಿಂದ ಹೀಗೆ ಅರಿಕೆ ಮಾಡಿಕೊಳ್ಳುತ್ತಾನೆ;

*ಮನಮನ ಏಕಾರ್ಥವಾಗಿ ಕಾಯಕ್ಕೆ ಕಾಯ ಸಂಬಂಧವಾಗಿ*
*ಪ್ರಾಣಕ್ಕೆ ಪ್ರಾಣ ಸಮದರುಶನವಾಗಿದ್ದವರಲ್ಲಿ*
*ತೆರಮರೆಯೆಂಬುದಿಲ್ಲ ನೋಡಯ್ಯಾ*
*ಸಂಗ ನಿಸ್ಸಂಗವಾಗಿಪ್ಪವರಲ್ಲಿ ಉಪಚರ್ಯಕ್ಕೆ ಇಂಬಿಲ್ಲ*

* ನಂ. ೭೪೪, ಬಸವಚೇತನ, ರಾಮತೀರ್ಥನಗರ, ಬೆಳಗಾವಿ-೦೬.

*ನೋಡಯ್ಯ ಬಸವಪ್ರಿಯ ಕೂಡಲಚೆನ್ನಸಂಗಯ್ಯನ ಶರಣ*
*ಬಸವನಟ್ಟಿದನು ಕೃಪೆ ಮಾಡು ಗುರುವೇ*

ಅಪ್ಪಣ್ಣನ ನಯ, ವಿನಯ, ಭಕ್ತಿ, ಸೂಕ್ಷ್ಮ ಮಾತಿನ ಕೇಳಿಕೆಗೆ ಕಿವಿಗೊಡದೆ

*ಮನಮನ ಒಂದಾಗಿ ತನುತನು ಒಂದಾಗಿ ಬೆರೆಸಿದ ಬಳಿಕ*
*ಕರೆಯಲಿಲ್ಲ ಕಾಲುವಿಡಿಯಲಿಲ್ಲ ಎಂದರಿದವರು*
*ಉಪಚರಿಸಿ ಬರಹೇಳಿದರೆ ಅದೇ ಕೊರತೆ ನೋಡಾ*
*ಅಂಗದ ಕೈಲಿ ಕ್ರೀಯಿರಲಿ ಮಾತಿನ ಅದ್ವೈತ ಎಂತಪ್ಪುದೋ*
*ಅನಾಗದ ಮುನ್ನವೇ ತಾನಾದೆನೆಂಬವರಲ್ಲಿಗೆ*
*ನಮ್ಮ ಗುಹೇಶ್ವರ ಲಿಂಗವು ಅಡಿ ಇಡುವನಲ್ಲ.*

ಎಂದು ನುಡಿಯಲು ಪ್ರಭುದೇವರ ಮಾತಿನ ಮೊನಚನ್ನು ಅರಗಿಸಿಕೊಂಡ ಅಪ್ಪಣ್ಣನು ಅಡಕೊತ್ತಿನಲ್ಲಿ ಸಿಕ್ಕ ಅಡಿಕೆಯಂತಾದನು. ಬಸವಣ್ಣನವರ ಮನ ಒಲಿಸಿ ಅವರನ್ನೇ ಇವರ ಬಳಿ ಕರೆತರುವುದೊಂದೇ ಉಳಿದಿರುವ ಮಾರ್ಗ ಎಂದರಿತು ಬಸವಣ್ಣನವರ ಬಳಿ ಬಂದು ಈ ರೀತಿ ಭಿನ್ನವಿಸಿಕೊಳ್ಳುತ್ತಾನೆ.

*ದೇವ ದೇವ ಮಹಾಪ್ರಸಾದ*
*ನಿಮ್ಮ ಶರಣರ ಮನೆಯ ಸಲುಗೆಯ ಬಂಟ ನಾನಯ್ಯ*
*ತನು ಮನ ಧನವ ಹಿಂದಿಕ್ಕಿಕೊಂಡಿಪ್ಪ ವಂಚಕ ನಾನಯ್ಯ*
*ನಿಮ್ಮ ಶರಣರು ಎನ್ನಿಚ್ಛೆಗೆ ಬಪ್ಪರೆ ?*

.........................................................................

*ನೀವೇ ಹೋಗಿ ಬಿಜಯಂಗೈಸಿಕೊಂಡು ಬಾರಾ*
*ಸಂಗನಬಸವಣ್ಣಾ*

ನಿಂತರೆ ನೆಳಲಿಲ್ಲ, ಸುಳಿದರೆ ಹೆಜ್ಜೆಗಳಿಲ್ಲ. ಕಂಗಳಿಗೆ ಕಾಣನು, ಮುಟ್ಟಲು ಕೈಗೆ ಸೋಂಕನು, ವಾಙ್ಮನಾತೀತನು. ಬಂದ ಮಹಾಘನರು ಪ್ರಭುದೇವರೆ ಎಂದು ತೋರುತಿದೆ. ನೀವೇ ಕರೆದುಕೊಂಡು ಬರುವುದೇ ಸೂಕ್ತ ಎಂದು ಅಪ್ಪಣ್ಣ ಸ್ಪಷ್ಟವಾಗಿ ತಿಳಿಸಲು, ಬಸವಣ್ಣನವರು ಲಿಂಗಪೂಜೆ ನಿಲ್ಲಿಸಿ ಪ್ರಭುದೇವ ಸಿದ್ಧರಾಮರನ್ನು ಬರಮಾಡಿಕೊಳ್ಳಲು ಧಾವಿಸುತ್ತಾರೆ. ಆಳವಾದ ಅರಿವು ಅನುಭವದ ಖಣಿಯಾಗಿದ್ದ ಅಪ್ಪಣ್ಣ ಹೀಗೆ ಪ್ರಭುದೇವ ಮತ್ತು ಬಸವಣ್ಣನವರ ನಡುವೆ ಸೂಕ್ಷ್ಮ ರೀತಿಯಲ್ಲಿ ರಾಯಭಾರ ನಡೆಸುವಲ್ಲಿ ಯಶಸ್ವಿಯಾಗುತ್ತಾನೆ.

ಬಸವಣ್ಣ ಮತ್ತು ಅಪ್ಪಣ್ಣನ ನಡುವೆ ಅತ್ಯಂತ ಅವಿನಾಭಾವ ಸಂಬಂಧವಿತ್ತು. ಕಲ್ಯಾಣ ತೊರೆದು ಸಂಗಮಕ್ಕೆ ನಡೆದಾಗ ಬಸವಣ್ಣನವರು ತಮ್ಮೊಡನೆ ಅಪ್ಪಣ್ಣನನ್ನು ಮಾತ್ರ ಕರೆದೊಯ್ಯುತ್ತಾರೆ. ಇಹಲೋಕದಲ್ಲಿ ತಮ್ಮ ಮಣಿಹ ಮುಗಿದು ಸಂಗಮನಾಥನಲ್ಲಿ ಒಂದಾಗುವ ಮೊದಲು ತನ್ನ ವಿಚಾರಪತ್ನಿ ನೀಲಾಂಬಿಕೆಯನ್ನು ಸಂಗಮಕ್ಕೆ ಕರೆತರಲು ಅಪ್ಪಣ್ಣನನ್ನು ಕಳಿಸುತ್ತಾರೆ. ಅಪ್ಪಣ್ಣ ಕಲ್ಯಾಣಕ್ಕೆ ಬಂದು ಈ ವಿಷಯ ನೀಲಾಂಬಿಕೆಗೆ ತಿಳಿಸಲು 'ಇಲ್ಲಿಲ್ಲದ ಸಂಗಯ್ಯ ಅಲ್ಲಿರುವನೆ? ಅಲ್ಲಿರುವ ಬಸವಯ್ಯ ಇಲ್ಲಿಲ್ಲವೆ?' ಎನ್ನುತ್ತ ನೀಲಾಂಬಿಕೆ ತನ್ನ ಇಷ್ಟಲಿಂಗ ಪೂಜೆ ಧ್ಯಾನದಲ್ಲಿ ತೊಡಗಿ ದೃಷ್ಟಿ ಏಕವಾಗಿ ಲಿಂಗದಲ್ಲಿಯೇ ಐಕ್ಯಹೊಂದಿ ಬಯಲಾಗುತ್ತಾಳೆ. ಇದನ್ನು ಪ್ರತ್ಯಕ್ಷ ಕಂಡ ಅಪ್ಪಣ್ಣನು ಸಂಗಮಕ್ಕೆ ಬಂದು ನಡೆದ ಘಟನೆಯನ್ನು ಬಸವಣ್ಣನವರಿಗೆ ತಿಳಿಸುತ್ತಾನೆ. 'ನನ್ನೊಡನೆ ಹಾಸ್ಯವೆ? ಅಪ್ಪಣ್ಣ ನಿಜಸಂಗತಿಯನ್ನು ನಡೆದಂತೆ ಹೇಳು' ಎಂದು ಬಸವೇಶ್ವರರು ಹೇಳಲು ಅಪ್ಪಣ್ಣನು ಗದ್ಗದಿತನಾಗಿ ನಡೆದ ಘಟನೆಯನ್ನು ಸಾದ್ಯಂತವಾಗಿ ವಿವರಿಸತೊಡಗುತ್ತಾನೆ. ತನ್ನ ಇಷ್ಟಲಿಂಗವನ್ನು ಅಂಗೈಯಲ್ಲಿ ಇಟ್ಟುಕೊಂಡು ನೀಲಾಂಬಿಕೆಯಂತೆ ನೆಟ್ಟದೃಷ್ಟಿಯಲ್ಲಿ ಲಿಂಗಧ್ಯಾನ ಮಾಡುತ್ತ ಲಿಂಗದಲ್ಲಿ ಮನ ಸ್ಥಿರೀಕರಿಸಿ ಶ್ವಾಸೋಚ್ಛ್ವಾಸಗಳನ್ನು ಬಂಧಿಸಿ ತದೇಕ ದೃಷ್ಟಿಯಿಂದ ನೋಡುತ್ತ ನೋಡುತ್ತ ಲಿಂಗದಲ್ಲಿಯೆ ಬಯಲಾಗಿಬಿಡುತ್ತಾನೆ. 'ಶರಣರ ಮಹಿಮೆ ಮರಣದಲ್ಲಿ ಕಾಣು' ಎಂಬಂತೆ ಅಪ್ಪಣ್ಣನು ಮರಣವನ್ನು ಮಹಾನವಮಿಯಾಗಿಸಿ ಮಹಾಮಹಿಮನಾಗುತ್ತಾನೆ.

ಹಲವಾರು ಪುರಾಣ ಕಾವ್ಯಗಳಲ್ಲಿ ಹಡಪದ ಅಪ್ಪಣ್ಣನ ಬಗ್ಗೆ ವರ್ಣನೆ ಬಂದಿದೆ. ಲೌಕಿಕ ಜೀವನ, ಪಾರಮಾರ್ಥಿಕ ಜೀವನ ಎರಡರಲ್ಲೂ ಮಿಂಚಿದ ಅನುಭಾವಿ ಅಪ್ಪಣ್ಣ ಶ್ರೇಷ್ಠ ವಚನಕಾರನೂ ಆಗಿದ್ದನು. ಅನುಭಾವದ ವಿದ್ವತ್ಪೂರ್ಣ ವಚನಗಳನ್ನು ರಚಿಸಿದ್ದಾನೆ. ಇವನ ವಚನಾಂಕಿತ 'ಬಸವಪ್ರಿಯ ಕೂಡಲ ಚೆನ್ನಬಸವಣ್ಣ' ಎಂದಿದೆ. ಇದುವರೆಗೆ ಇವನ ೨೪೬ ವಚನಗಳು ಲಭ್ಯವಿದೆ. ಇವನ ವಚನಗಳು ಸಹಜತೆ ಸರಳತೆ ಬೆಡಗಿನಿಂದ ಸಂಪದ್ಭರಿತವಾಗಿವೆ. ಇವನಿಗೆ ಅನುರೂಪದ ಪತ್ನಿಯಾಗಿದ್ದ ಲಿಂಗಮ್ಮನೂ ವಚನಕಾರ್ತಿ ಯಾಗಿದ್ದು ಅವಳ ೧೧೩ ವಚನಗಳು ದೊರಕಿದ್ದು ಅವು ಅತ್ಯಂತ ಪಾಂಡಿತ್ಯಪೂರ್ಣವಾಗಿವೆ.

ಜೀವನ ಪರ್ಯಂತ ತನಗೆ ಆಪ್ತವಾಗಿ ಮಾರ್ಗ ದರ್ಶಕನಾಗಿ ತನ್ನ ಸುಖ ದುಃಖದಲಿ ಒಂದಾಗಿ ಜೀವನ ಸಾಫಲ್ಯ ಮಾಡಿಕೊಂಡ ಅಪ್ಪಣ್ಣನನ್ನು ಬಸವಣ್ಣನವರು ಮನದುಂಬಿ ಕೊಂಡಾಡಿದ್ದಾರೆ–

*ಏನೆಂದುಪಮಿಸುವೆನಯ್ಯಾ ತನ್ನಿಂದ ತಾ ತೋರದೆ*
*ಗುರುಮುಖದಿಂದ ತೋರಿದ ತನ್ನ ನಿಲವ ನಿರುಪಮನು?*
*ಕೂಡಲಸಂಗಮದೇವರಲ್ಲಿ......... ಪ್ರಭುದೇವರು*
*ಸಿದ್ಧರಾಮದೇವರು ಹಡಪದಪ್ಪಣ್ಣನಿಂದ ಕಂಡು*
*ಎನ್ನ ಜನ್ಮ ಸಫಲವಾಯಿತ್ತಯ್ಯ.*

ಬಸವಣ್ಣನವರಂತೆ ಇನ್ನುಳಿದ ಶರಣರು ಅಪ್ಪಣ್ಣನನ್ನು ತಮ್ಮ ವಚನಗಳಲ್ಲಿ ಸ್ಮರಿಸಿಕೊಂಡಿದ್ದಾರೆ.

ಬಿಜಾಪುರ ಜಿಲ್ಲೆ ಮುದ್ದೇಬಿಹಾಳ ತಾಲ್ಲೂಕಿನ ತಂಗಡಗಿಯಲ್ಲಿ ಹಡಪದ ಅಪ್ಪಣ್ಣನ ಸಮಾಧಿ ಇದೆ. ಬಸವ ಕಲ್ಯಾಣದ ಉತ್ತರಕ್ಕೆ ಬೇಟ ಬಾಲಕುಂದ ಗ್ರಾಮದ ಸಮೀಪದ ಬೆಟ್ಟದಲ್ಲಿ ಗವಿ ಇದೆ. ಬನವಾಸಿಯ ಮಧುಕೇಶ್ವರ ದೇವಸ್ಥಾನದಲ್ಲಿ ಗಗ್ಗರಿ ಕಲ್ಲಿನಲ್ಲಿ ಅಪ್ಪಣ್ಣನ ವಿಗ್ರಹವಿದೆ. ಪ್ರತಿವರ್ಷ ಕಡ್ಲಿಗಡಬ ಹುಣ್ಣಿಮೆಯಂದು ಶರಣ ಅಪ್ಪಣ್ಣನ ಜಯಂತಿಯನ್ನು ಆಚರಿಸುತ್ತಾರೆ. ☆

> ಇಂದಿನ ಸಂಕೀರ್ಣ ಜಗತ್ತಿಗೆ ಅಗತ್ಯವಾದ ವೈಚಾರಿಕ ಹಿನ್ನಲೆಯನ್ನು ಕೊಡಲು ವೀರಶೈವ ಸಂಸ್ಕೃತಿ ಸಮರ್ಥವಾಗಿದೆ. ಆದರೆ ಅದನ್ನು ಹೊಸದೃಷ್ಟಿಯಿಂದ ನೋಡುವ ವಿಚಾರಶೀಲತೆ ಅಗತ್ಯ. -ಡಾ.ಎಚ್. ತಿಪ್ಪೇರುದ್ರಸ್ವಾಮಿ

## ಶ್ರದ್ಧಾಂಜಲಿ

**ಪ್ರೊ. ಆರ್. ರಾಚಪ್ಪನವರು** ದಿನಾಂಕ ೨೭-೦೪-೨೦೧೪ರಂದು ಲಿಂಗೈಕ್ಯರಾದುದನ್ನು ತಿಳಿದು 'ಸಿದ್ಧಗಂಗಾ'ಕ್ಕೆ ಅತೀವ ದುಃಖವುಂಟಾಯಿತು. ಬೆಳ್ಳಾವಿಯಲ್ಲಿ ೧೯೩೬ರಲ್ಲಿ ಜನಿಸಿದ ಶ್ರೀಯುತರು ತುಮಕೂರು, ಧಾರವಾಡಗಳಲ್ಲಿ ವಿದ್ಯಾಭ್ಯಾಸ ಮಾಡಿ, ಬೆಂಗಳೂರಿನಲ್ಲಿ ಶ್ರೀ ಜಗದ್ಗುರು ರೇಣುಕಾಚಾರ್ಯ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇವಾಜೀವನವನ್ನು ಆರಂಭಿಸಿ ಅದೇ ಕಾಲೇಜಿನ ಪ್ರಾಚಾರ್ಯರಾಗಿ ನಿವೃತ್ತರಾಗಿದ್ದರು. ಉತ್ತಮ ಬೋಧಕರಾಗಿ, ಆಡಳಿತಗಾರರಾಗಿ ಹೆಸರು ಗಳಿಸಿದ್ದರು.

ಸಾಹಿತ್ಯ ಕ್ಷೇತ್ರದಲ್ಲಿ ಸಂಶೋಧಕರಾಗಿ, ಗ್ರಂಥಕರ್ತರಾಗಿ ಉತ್ತಮ ಭಾಷಣಕಾರರಾಗಿದ್ದರು. ದೇವರ ದಾಸಿಮಯ್ಯನ ವಚನಗಳನ್ನು ಸಂಪಾದಿಸಿದ್ದರು. ಶ್ರೀಮಠದ ಧಾರ್ಮಿಕ, ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಶ್ರೀಮಠದಲ್ಲಿ ಜರುಗುವ ಹುಣ್ಣಿಮೆ ಉಪನ್ಯಾಸ ಪರಂಪರೆಯಲ್ಲಿ ಒಂದು ವರ್ಷಕ್ಕಿಂತಲೂ ಹೆಚ್ಚು ಉಪನ್ಯಾಸ ನೀಡಿದವರು. ಗುರುವಂದನಾ ಸಮಾರಂಭ, ಪೂಜ್ಯ ಅಟವೀಶ್ವರರ ಮತ್ತು ಪೂಜ್ಯಶ್ರೀ ಉದ್ಧಾನ ಶಿವಯೋಗಿಗಳವರ ಸ್ಮರಣೋತ್ಸವದಲ್ಲಿ ಪಾಲ್ಗೊಳ್ಳುತ್ತಿದ್ದರು. 'ಸಿದ್ಧಗಂಗಾ' ಮಾಸಪತ್ರಿಕೆಯಲ್ಲಿಯೂ ಸೇವೆ ಸಲ್ಲಿಸುತ್ತ ಬಂದ ಸುಸ್ನೇಹಿಗಳು. ಬೆಳ್ಳಾವಿಯಲ್ಲಿ ನಡೆದ ತುಮಕೂರು ತಾಲ್ಲೂಕು ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿಯೂ ಗೌರವಪಾತ್ರರಾಗಿದ್ದರು.

ಶ್ರೀಯುತರ ಅಗಲಿಕೆಯಿಂದ ಅವರ ಕುಟುಂಬವರ್ಗದವರಿಗಾಗಿರುವ ದುಃಖವನ್ನು ಸಹಿಸುವ ಶಕ್ತಿ ಶ್ರೀ ಸಿದ್ಧಗಂಗಾಗುರುಪಂಪರೆ ದಯಪಾಲಿಸಲಿ ಎಂದು ಆಶಿಸುತ್ತ ಲಿಂಗೈಕ್ಯರ ಆತ್ಮಕ್ಕೆ ಚಿರಶಾಂತಿಯನ್ನು ಅನುಗ್ರಹಿಸಲಿ ಎಂದು ಹಾರೈಸುತ್ತ **'ಸಿದ್ಧಗಂಗಾ'** ಭಾವಪೂರ್ಣ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

# ಬಯಲ ಪ್ರಸಾದಿ ಶಂಕರ ದಾಸಿಮಯ್ಯ

-ಶಕುಂತಲಾ ಯು.. *

ನಾರಾಯಣಪುರ ಅಣೆಕಟ್ಟೆಯ ವಿಸ್ತಾರವಾದ ಹಿನ್ನೀರಿನ ಒಡಲಲ್ಲಿ ಸಿಲುಕಿರುವ ಜಡೆಯ ಶಂಕರಲಿಂಗ ದೇವಸ್ಥಾನವು ರಾಯಚೂರು ಜಿಲ್ಲೆಯ ಲಿಂಗಸಗೂರು ತಾಲ್ಲೂಕಿನ ಮುದುಗಲ್ಲ ಸಮೀಪ ಪಶ್ಚಿಮ ದಿಕ್ಕಿನ ನವಲಿ ಗ್ರಾಮ (ಈಗ ಮಯೂರಪುರ) ದಲ್ಲಿದೆ. ಈ ದೇವಾಲಯ ಪ್ರಸಿದ್ಧಿಗೆ ಬಂದದ್ದು ಶಿವಶರಣ ಶಂಕರದಾಸಿಮಯ್ಯನಿಂದ.

ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕಿನ ಕಂದಗಲ್ಲು ಗ್ರಾಮದಲ್ಲಿ ಗೋವಿಂದಭಟ್ಟನೆಂಬ ಬ್ರಾಹ್ಮಣ ತನ್ನ ಪತ್ನಿ ದುಮ್ಮವ್ವ ಳೊಡನೆ ವಾಸಿಸುತ್ತಿದ್ದ. ಕಾಶಿಯಾತ್ರೆಗೆಂದು ಹೊರಟಿದ್ದ ಈ ದಂಪತಿಗಳು ನವಿಲೆಯ ಜಡೆಯಶಂಕರ ದರ್ಶನ ಪಡೆದು ಪ್ರಭಾವಿತರಾಗಿ ನೆಲೆನಿಂತು ಶಿವದೀಕ್ಷೆ ಹೊಂದಿ ಜಡೆಶಂಕರನ ಆರಾಧಕನಾಗಿ ನೂಲಿಗೆ ಬಣ್ಣವ ಹಾಕುವ ಕಾಯಕ ಹೊಂದಿ ಪತ್ನಿ ಸಹಿತ ದಾಸೋಹ ಮಾಡುತ್ತ ಇಲ್ಲಿಯೇ ಇದ್ದನಂತೆ.

ಇನ್ನೇಕೆ ವಾರಾಣಾಸಿಯ ಪಯಣ ತನಗೆಂದು ಎನಗೆ ಎನಗೆ ನಿತ್ಯಾವಾಸಮುಂ ದೇಶಮುಂ ನೀನೆ' ಎಂದು ಅಲ್ಲಿಯೇ ವಾಸಿಸಿದನು. ಜಡೆಯ ಶಂಕರನ ಸೇವೆಯಲ್ಲಿ ನಿರತನಾದನು. ಶಂಕರನು ಮೆಚ್ಚಿ ನೊಸಲ ಮೇಲೆ ಹಸ್ತ ಇರಿಸಿದಾಗ ನೊಸಲಗಣ್ಣು ಉಂಟಾಯಿತು. ದೀಪ್ತಿಯ ಪ್ರಭಾವ ಉಂಟಾಯಿತು. ಅಂದರೆ ಜ್ಞಾನದ ಈ ನೊಸಲಗಣ್ಣು ಬೇರೆಯವರಿಗೆ ತೋರಬಾರದೆಂದು ಶಂಕರ ಅದಕ್ಕೆ ನಂದಿಯ ಮುಖವಾಡ ಹಾಕುತ್ತಾನೆ. ಹೀಗೆ ಶಂಕರನ ದಾಸನಾದುದಕ್ಕೆ ಗೋವಿಂದಭಟ್ಟ ಮತ್ತು ಪತ್ನಿ ದುಮ್ಮವ್ವೆ ಶಂಕರ ದಾಸಿಮಯ್ಯ ಮತ್ತು ಶಿವದಾಸಿ ಎಂಬ ಹೊಸ ಹೆಸರನ್ನು ಹೊಂದಿದರು. ಇವರ ಶಿಷ್ಯ ವಕ್ತ್ರಪಾದ, ಈತನಿಂದ ನಿತ್ಯ ಒಂದು ಮನೆಯ ಭಿಕ್ಷೆ ತರಿಸಿ ತನ್ನ ಹೊಲಿಗೆಯ ಕಾಯಕದಿಂದ ಬಂದ ಹಣ, ಭಿಕ್ಷದ ಧಾನ್ಯದಿಂದ ನಿತ್ಯಗಣಾರಾಧನೆ ಮಾಡುತ್ತಿದ್ದನು.

ಈತನ ಸೂಜಿಕಾಯಕ ಆಧ್ಯಾತ್ಮಿಕವಾಗಿ ಈ ರೀತಿ ಇದೆ. 'ದೇಹಿಯಾದ ಜೀವಾತ್ಮನನ್ನು ದೇಹಿಯನ್ನಾಗಿ ಮಾಡಿ, ಮಾಯಾಪಾಶಗಳನ್ನು ದಾರಗಳನ್ನಾಗಿ ಮಾಡಿ, ಕಾಲತ್ರಯ ಗಳೆಂಬ ಕತ್ತರಿಗಳಿಂದ ಭವಬಂಧವಸ್ತ್ರವನ್ನು ಕತ್ತರಿಸುವನು. ಮೋಹವೆಂಬ ಸರಿಯನ್ನು ಹಚ್ಚಿ, ಅಜ್ಞಾನವೆಂಬ ಹತ್ತಿಯನ್ನು ಅಂತರಂಗದೊಳಗೆ ತುಂಬುವನು.

ಜಡೆಯಶಂಕರನ ಸುಬೋಧಸಾರ ಎಂದರೆ 'ಅಹಂಭಾವ ವನ್ನು ಬಿಡು, ದಾಸೋಹಿಯಾಗು, ಲಿಂಗ ದೇಹಿಗಳೆಲ್ಲರನ್ನು ಶಿವಲಿಂಗ ಎಂದು ತಿಳಿ. ಪರಧನವ ಪರವಧುವ ವಿಷವೆಂದು ತಿಳಿ' ಇದನ್ನು ಪಾಲಿಸಿದ.

ದೇವರ ದಾಸಿಮಯ್ಯನಿಗೆ ಅಹಂಕಾರ ಬಂದದ್ದನ್ನು ಅರಿತು ಶಿವನು ಶಂಕರ ದಾಸಿಮಯ್ಯನ ಕನಸಿನಲ್ಲಿ ಬಂದು ಮುದನೂರಿಗೆ ಹೋಗಿ ಉಪಾಯದಿಂದ ದೇವರ ದಾಸಿಮಯ್ಯನ ಅಹಂಕಾರ ಅಡಗಿಸಲು ಸೂಚಿಸಿದ. ಈಗಾಗಲೇ ದೇವರ ದಾಸಿಮಯ್ಯ ಅಪಾರ ಧಾನ್ಯಗಳನ್ನು ದಾನ ಮಾಡು ತ್ತಿದ್ದುದರಿಂದ ಅಹಂ ಬಂದಿತ್ತು.

ಶಂಕರದಾಸಿಮಯ್ಯ ಮುದನೂರಿಗೆ ಹೋದಾಗ ದೇವರ ದಾಸಿಮಯ್ಯ ದಂಪತಿಗಳು ಆದರಿಂದ ಸ್ವಾಗತಿಸಿದರು. ಶಿವಾನುಭವ ಗೋಷ್ಠಿ ನಡೆಸಿದರು. ಶಂಕರದಾಸಿಮಯ್ಯ ತನ್ನ ಶಿಷ್ಯನಿಗೆ ಧಾನ್ಯದ ಭಿಕ್ಷೆ ತರಲು ಹೇಳಿದಾಗ, ದೇವರ ದಾಸಿಮಯ್ಯ ನನ್ನಲ್ಲಿ ಬೇಕಾದಷ್ಟು ಧಾನ್ಯವಿದೆ ಮತ್ತೇಕೆ ಎಂದು ಕೇಳಿದನು.

ಆಗ ಶಂಕರದಾಸಿಮಯ್ಯ 'ನೀವು ತವನಿಧಿ ಶ್ರೀಮಂತರು. ನಾವು ಬಡವರು, ನಮ್ಮ ದೇವರು ತಿರುಕ! ಅವನನ್ನು ಉಪಾಸಿಸುವ ನಮಗೆ ಸಿರಿವಂತಿಕೆ ಹೇಗೆ? ನಿಮ್ಮ ದಾನ ಬುದ್ಧಿ ಹೆಚ್ಚಿನದು. ನೀವು ಬೇಡದೇ ಕೊಡುವವರು. ನೀವು ಕೊಡುವೆವೆಂಬುದೇ ಸಾಕು. ನಿಮ್ಮ ತವನಿಧಿಯ ಮಹಿಮೆ ಯಿಂದ 'ನಮಗೆ ಧಾನ್ಯ ದೊರಕಿತು' ಉಪಕಾರ ವಾಯಿತು'ಎಂದನು.

ದೇವರದಾಸಿಮಯ್ಯ ಅಪ್ರತಿಭನಾದನು. ಮನೆಗೆ ಹೋಗಿ ತನ್ನ ತಪ್ಪನ್ನು ಅರಿತ. ಮೋಕ್ಷದ ಅಕ್ಷಯ ಸುಖವನ್ನು ಬಿಡದೇ ತನ್ನ ತವನಿಧಿಯ ಮೋಹಕ್ಕೆ ಒಳಗಾದೆನಲ್ಲ. ಈ ಹಮ್ಮು ಅಧಃಪತನಕ್ಕೆ ಕಾರಣವಾಗುವುದು ಎಂದು ಚಿಂತಿಸಿ ಪುನಃ ಶಂಕರದಾಸಿಮಯ್ಯನ ಬಳಿ ಬಂದು

*ಹಸುಳೆ ಬೈದರೆ ಪಡೆದವರು ಲಾ*
*ಲಿಸುವರಲ್ಲದೆ ಕೋಪಿಸದೇ ಜೀ*
*ವಿಸುವರೆ ನಾ ನಿಮ್ಮ ಮಗ ಮನ್ನಿಸೈ ಕೃಪಾಂಬುಧಿಯೆ*

ಎಂದು ಪಾದಕ್ಕೆ ಬಿದ್ದನು. ಶಿವದಾಸಿ ಪ್ರಸಾದವನ್ನು ಸಿದ್ಧ ಗೊಳಿಸಿದಳು. ವಕ್ತ್ರಪಾದ ಶಂಕರದಾಸಿಮಯ್ಯ ತಂಗಿದ ಮನೆಯ. ಅಂಗಳವನ್ನು ಅಗಿದಾಗ, (ಗುರುವಿನ ಆಜ್ಞೆ ಪ್ರಕಾರ). ಚಿನ್ನದ ವಸ್ತುಗಳು ದೀಪಸ್ತಂಭ ದೊರೆತವಂತೆ. ಪ್ರಸಾದ ವ್ಯವಸ್ಥೆ ಆಯಿತು. ದೇವರದಾಸಿಮಯ್ಯ ಮನೆಗೆ ಬಂದಾಗ ಅವನ ತವನಿಧಿಯೂ ಇನ್ನೂ ಹೆಚ್ಚಾಗಿತ್ತು. ಆದರೆ ಅದಕ್ಕಿಂತ ಮಿಗಿಲಾದ ತವನಿಧಿ ಅವನಿಗೆ ದೊರಕಿದ್ದಿತ್ತು. ಅದೇ ನಿರಹಂಕಾರದ ತವನಿಧಿ.

ಶಂಕರದಾಸಿಮಯ್ಯನ ವಚನಗಳು ಐದು. ನವಲಿ ಯಲ್ಲಿಯ ಶಂಕರಲಿಂಗ ದೇವಾಲಯ, ಚಾಲುಕ್ಯ ವಾಸ್ತುಶಿಲ್ಪ ವಾಗಿದ್ದು, ಚೌಕಾಕಾರದ ಗರ್ಭಗುಡಿಯ ಮಧ್ಯದಲ್ಲಿ ದೊಡ್ಡ ಪೀಠದ ಮೇಲೆ ಶಿವಲಿಂಗ ಇದ್ದು ತಲೆಯ ಮೇಲೆ ಕೂದಲುಗಳು ಇಳಿ ಬಿದ್ದ ಹಾಗೆ ಕಾಣುತ್ತವೆ. ಅದಕ್ಕೆ ಜಡೆಶಂಕರಲಿಂಗ ಎನ್ನುತ್ತಾರೆ. ಬಸವಸಾಗರದ ಒತ್ತು ನೀರಿನಲ್ಲಿ ಮುಳುಗಡೆ ಆಗುತ್ತಿರುವ ಈ ದೇವಾಲಯದ ರಕ್ಷಣೆ ಆಗುವುದು ಅವಶ್ಯವಾಗಿದೆ. ಶಂಕರದಾಸಿಮಯ್ಯ, ಪತ್ನಿ ಶಿವದಾಸಿ ಮತ್ತು ಮಗ ಸದ್ಯೋಜಾತ ನವಲಿಯಲ್ಲಿಯೇ ಕಾಲವಾದರು ಎನ್ನಲಾಗಿದೆ.

ಶಂಕರದಾಸಿಮಯ್ಯನವರು ತಮ್ಮ ಒಂದು ವಚನದಲ್ಲಿ ಸಮಕಾಲೀನ ಶರಣರನ್ನು ಸ್ಮರಿಸಿದ್ದಾರೆ

*'ಎನ್ನ ಕಾಯಕ್ಕೆ ಗುರುವಾದನಯ್ಯ ಬಸವಣ್ಣನು*
*ಎನ್ನ ಜೀವಕ್ಕೆ ಲಿಂಗವಾದನಯ್ಯ ಚೆನ್ನಬಸವಣ್ಣನು*
*ಎನ್ನ ಪ್ರಾಣಕ್ಕೆ ಪ್ರಸಾದವಾದನಯ್ಯ ಮರುಳಶಂಕರದೇವ*
*ಎನ್ನ ಜ್ಞಾನಕ್ಕೆ ಜಂಗಮವಾದನಯ್ಯ ಪ್ರಭುದೇವರು*
*ಇಂತಿವರ ಕರುಣದಿಂಧಲಾನು ಬದುಕಿದೆನಯ್ಯಾ*
*ನಿಜಗುರುಶಂಕರದೇವಾ'* ಎಂದಿದ್ದಾರೆ.

ಮತ್ತೊಂದು ವಚನದಲ್ಲಿ ಪ್ರಭುದೇವರ ಶ್ರೀಪಾದವ ಕಂಡು ನಿಶ್ಚಿಂತನಾದೆನಯ್ಯಾ ಎಂದಿದ್ದಾರೆ. ಶರಣ ಸಂಕುಲದಲ್ಲಿ ಬಯಲ ಪ್ರಸಾದಿ ಎಂದು ಹೆಸರಾಗಿದ್ದಾರೆ.

ಶಂಕರದಾಸಿಮಯ್ಯ ದೇವರದಾಸಿಮಯ್ಯನ ಅಹಂಕಾರ ವನ್ನು ಕಳೆದ ಬಸವಪೂರ್ವಯುಗದ ಮತ್ತೊಬ್ಬ ಶರಣ. ಹರಿಹರನ ಶಂಕರದಾಸಿಮಯ್ಯನ ರಗಳೆ ಮಲ್ಲಿಕಾರ್ಜುನ ಕವಿಯ ಶಂಕರದಾಸಿಮಯ್ಯನ ಪುರಾಣಗಳಲ್ಲಿ ಈತನ ಚರಿತ್ರೆ ಲಿಖಿತವಾಗಿದೆ. ಈತನ ಎರಡು ವಚನಗಳು ಶೂನ್ಯಸಂಪಾದನೆ ಯಲ್ಲಿ ಸೇರಿವೆ. ಈತನ ಅಂಕಿತನಾಮ 'ನಿಜಗುರು ಶಂಕರದೇವಾ' ಶಂಕರ ದಾಸಿಮಯ್ಯ ಪುರಾಣ ಗ್ರಂಥವನ್ನು ೧೯೪೧ರಲ್ಲಿ ನಿವೃತ್ತ ನ್ಯಾಯಾಧೀಶ ವೀರಭದ್ರಪ್ಪ ಬಸವಪ್ಪ ಹಾಲಬಾವಿ ಅವರು ಪ್ರಕಟಿಸಿದ್ದಾರೆ. ಇದನ್ನು ೨೦೦೯ರಲ್ಲಿ ಜಡೆಯಶಂಕರಲಿಂಗ ಟ್ರಸ್ಟ್ ಪುನರ್ ಮುದ್ರಿಸಿದೆ.

ಶಿವಗಣ ಪ್ರಸಾದಿಯ ಶೂನ್ಯಸಂಪಾದನೆಯಲ್ಲಿ ಬರುವ ವಚನ ಹೀಗಿದೆ–

*'ಹರನ ನಿರೂಪನಿಂಡ ಧರೆಗೆ ಬಸವಣ್ಣನವತರಿಸಿದ*
*ಕಾರಣ ಶಿವಾಚಾರ ಸದಾಚಾರವೆಂಬುದು*
*ಧರೆಗೆ ವಿಖ್ಯಾತವಾಗಿತ್ತು. ಶಿವಗಣ ಪ್ರಮಥಗಣಗಳೆಂಬ*
*ಮಹಾಮಹಿಮರ ಸುಳುಹು ಧರೆಯ ಮೇಲೆ*
*ಕಾಣಬಂದಿತ್ತು. ನೋಡಯ್ಯಾ, ಪರುಷವ ಸಾಧಿಸಿ*
*ದಂತಾಯಿತ್ತು. ನಿಮ್ಮ ಶರಣರ ಸಂಗದಿಂದ*
*ಎನ್ನ ನಂದಿಯ ಮೊಗವಾಡ, ನೊಸಲ ಕಣ್ಣಿಂಟೆಂಬ*
*ಅಹಂಕಾರವ ಮುದಗೊಂಡಿದ್ದೆನಯ್ಯಾ*
*ಎನ್ನ ಮದ ಉಡುಗಿ ಸಂಗನ ಬಸವಣ್ಣನ ಕರುಣದಿಂದ*
*ಪ್ರಭುದೇವರೆಂಬ ನಿರಾಳವ ಕಂಡು ಬದುಕಿದೆನು*
*ಕಾಣಾ ನಿಜಗುರು ಶಂಕರದೇವಾ'*

ಈ ವಚನದಲ್ಲಿ ಬಸವೇಶ್ವರರ ಅವತಾರದ ಬಗ್ಗೆ ಹೇಳುತ್ತ ಶರಣರ ಸಂಗದಿಂದ ಪರುಷ ಸೋಂಕಿದ ಲೋಹ ಚಿನ್ನವಾಗು ವಂತೆ ನಾನು ಬದಲಾದೆ. ನಂದಿಯ ಮೊಗವಾಡ, ನೊಸಲ ಕಣ್ಣಿನಿಂದ ಅಹಂಕಾರ ಹೊಂದಿದ್ದ ನನ್ನ ಅಹಂಕಾರವನ್ನು ತೊಲಗಿಸಿದ ಬಸವಣ್ಣನವರ ಕೃಪೆಯಿಂದ ಅಲ್ಲಮಪ್ರಭು ದೇವರನ್ನು ಕಂಡು ನೆಮ್ಮದಿಯಿಂದ ಬದುಕಿದೆನು ಕಾಣಾ ನಿಜಗುರು ಶಂಕರದೇವ ಎಂದು ಬಸವಣ್ಣನವರಿಗೆ, ಅಲ್ಲಮಪ್ರಭು ದೇವರಿಗೆ ಕೃತಜ್ಞತೆ ಸಲ್ಲಿಸಿದ್ದಾರೆ.

* 'ಜ್ಯೋತಿರ್ಲಿಂಗ', ೧ನೇ ತಿರುವು, ಹೈಸ್ಕೂಲ್ ಬಡಾವಣೆ, ಶಿವಮೊಗ್ಗ ರಸ್ತೆ, ಹೊನ್ನಾಳಿ-೫೭೭ ೨೧೭. ದಾವಣಗೆರೆ ಜಿಲ್ಲೆ.

'ಕಾಯವಿಲ್ಲಾಗಿ ಮಾಯವಿಲ್ಲ
ಮಾಯವಿಲ್ಲಾಗಿ ಮಥನವಿಲ್ಲ
ಮಥನವಿಲ್ಲಾಗಿ ಭಾವವಿಲ್ಲ
ಭಾವವಿಲ್ಲಾಗಿ ಬಯಕೆ ಇಲ್ಲ
ಬಯಕೆಯಿಲ್ಲಾಗಿ ನಿರ್ಭಾವ ನಿಜವನೈದಿ
ನಿಜಗುರು ಶಂಕರದೇವರೆಂಬುದು ತಾನಿಲ್ಲ'

ಈ ವಚನದಲ್ಲಿ ಮೋಹದ ಬಯಕೆ ಇಲ್ಲದಿರೆ ಮಾಯೆಯ ವ್ಯಾಮೋಹವಿಲ್ಲ ವ್ಯಾಮೋಹದ ಭ್ರಾಂತಿ ಇಲ್ಲದಾಗ ವಿಚಾರವಿಲ್ಲ. ವಿಚಾರವಿಲ್ಲದಾಗ ಭಾವನೆಗಳಿಲ್ಲ. ಭಾವನೆಗಳಿಲ್ಲದಾಗ ಆಸೆ ಹಂಬಲವಿಲ್ಲ ಬಯಕೆ ಇಲ್ಲದಾಗ ನಿರ್ಭಾವ ನಿಜವನ್ನೈದಿ ನಿಜಗುರು ತಾನಿಲ್ಲ ಎನ್ನುವ ಆಧ್ಯಾತ್ಮಿಕ ತತ್ತ್ವವನ್ನು ಶೂನ್ಯಸ್ಥಿತಿ ಯನ್ನು ಅನಾವರಣಗೊಳಿಸಿದ್ದಾರೆ.

'ಕಾಯದ ಮದವಳಿದಲ್ಲದೆ ಮಾಯಾ ವಿಕಾರವಳಿಯದು
ಮಾಯಾವಿಕಾರವಳಿದಲ್ಲದೆ ಭಾವನಾಶವಾಗದು
ಭಾವನಾಶವಾದಲ್ಲದೆ ಲಿಂಗಸಂಬಂಧವಳವಡದು
ಲಿಂಗಸಂಬಂಧವಳವಟ್ಟಲ್ಲದೆ ಸುಖವು ಸಾಧ್ಯವಾಗದು
ಪರಮಸುಖ ಪರಿಣಾಮಕ್ಕೆ ಮಹಾನುಭವಿಗಳ ಸಂಗ ಬೇಕು
ಮಹಾನುಭಾವಿಗಳ ಸಂಗದಿಂದಲ್ಲದೆ ವಿಶ್ರಾಮವಿಲ್ಲ
ಇಂತಪ್ಪ ಮಹಾನುಭಾವದ ಮೂರ್ತಿ
ಸಂಗನ ಬಸವಣ್ಣನ ಕೃಪೆಯಿಂದ ಎನಗೆ ನಿಜವು
ಕಾಣಬಂದಿತ್ತು.
ಇದು ಕಾರಣ ನಿಜಗುರು ಶಂಕರದೇವರ ಶರಣ ಪ್ರಭುದೇವರ
ಶ್ರೀಪಾದವ ಕಂಡು ನಿಶ್ಚಿಂತನಾದೆನಂತೆಪ್ಪಾ'

ಎಂದು ಈ ವಚನದಲ್ಲಿ ಭೌತಿಕ ದೇಹದ ಅಹಂ ಅಳಿದರೆ ಮನದ ವಿಕಾರವನ್ನು ತೊರೆಯಲು ಸಾಧ್ಯ. ಪಂಚೇಂದ್ರಿಯಗಳನ್ನು ನಿಯಂತ್ರಿಸಿದಾಗ ಐಹಿಕ ಭೋಗಾಪೇಕ್ಷೆಯಿಂದ ಮುಕ್ತಿ ಸಾಧ್ಯ. ಆಗ ಇಷ್ಟಲಿಂಗ ಸಂಬಂಧ ಸಾಧ್ಯ. ಇದರಿಂದ ಪರಮಸುಖ ಹೊಂದಲು ಮಹಾನುಭಾವಿಗಳ ಸಾಂಗತ್ಯ ಬೇಕು. ಇಂಥ ಮಹಾನುಭವಿ ಬಸವಣ್ಣನವರ ಕೃಪೆಯಿಂದ 'ನಿಜದರಿವ'ವನ್ನು ಹೊಂದಿದೆ. ಆ ಅರಿವಿನಿಂದ ಅಲ್ಲಮ ಪ್ರಭುದೇವರ ಶ್ರೀಪಾದವ ಕಂಡು ನಿಶ್ಚಿಂತನಾದೆನು ಎಂದಿದ್ದಾರೆ.

ತಮ್ಮ ಇನ್ನೊಂದು ವಚನದಲ್ಲಿ–

'ಎರಳೆ(ಯ) ಯಂತೆ ಕಾಕ ಪಿಕದಂತಿರಬೇಡವೇ?
ತಿಟ್ಟನೆ ತಿರುಗಿ ತೊಟ್ಟನೆ ತೊಳಲಿ
ಬಳಲುವವರ ತಳ ಹೇಸಿಗೆಯ ನೋಡಾ
ಇರುಳು ಹಗಲೆನ್ನದೆ ತಿರುಗುವವರ ಕಂಡು ಹೇಸಿದೆ
ಅರಿದಡೆ ಶರಣ ಮರೆದಡೆ ಮಾನವ
ಸತ್ತ ಕಸವ ಹೊತ್ತುಕೊಂಡು ಊರೂರಿಗೆ ಮಾರುವ
ಕಾಶಾಂಬರಧಾರಿಗಳ ನೊಲ್ಲ ನಿಜಗುರು ಶಂಕರದೇವ'

ಯತಿ, ಕಾಗೆ, ಕೋಗಿಲೆಗಳಂತೆ ತಿರುಗುತ್ತ ಬಳಲುವವರನ್ನು ಹಗಲುರಾತ್ರಿ ತಿರುಗುವವರನ್ನು ವಿಡಂಬಿಸಿದ್ದಾರೆ. ಸತ್ತ ಕಸವ ಎಂದರೆ ಬೇಡವಾದ ಚಿಂತನೆಗಳನ್ನು, ಮೂಢನಂಬಿಕೆಗಳನ್ನು ಹೊತ್ತು ಊರೂರು ಸುತ್ತಿ ಜನಮಾನಸದಲ್ಲಿ ಬಿತ್ತುವ ಆಡಂಬರ ಕಾವಿಧಾರಿಗಳನ್ನು ಒಲ್ಲೆ ಎಂದು ವಾಸ್ತವ ಜಗತ್ತಿನ ವೈರುಧ್ಯತೆಗಳನ್ನು ಹೇಳಿದ್ದಾರೆ ಇಲ್ಲಿ. ಅರಿದಡೆ ಶರಣ ಮರೆದಡೆ ಮಾನವ ಎಂಬುದು ಬಸವಣ್ಣನವರ ವಚನದಿಂದ ಎತ್ತಿಕೊಂಡು ಉಕ್ತಿಯಾಗಿದೆ.

ಶಂಕರದಾಸಿಮಯ್ಯ ತನ್ನ ಐದು ವಚನಗಳಲ್ಲಿ ಸಹಜವಾದ ಮಾತುಗಳಿಂದ ಅನುಭವವನ್ನು ಹಿಡಿದಿಡಲು ಪ್ರಯತ್ನಿಸಿದ್ದಾನೆ.

ಸಿದ್ಧರಾಮರು 'ಯೋಗಿನಾಥ' ಅಂಕಿತದಲ್ಲಿ ರಚಿಸಿರುವ ಮಿಶ್ರಸ್ತೋತ್ರ ತ್ರಿವಿಧಿಯಲ್ಲಿ 'ತ್ರಿನಯನ ದಾಸಯ್ಯ' ಎಂದು ಉಲ್ಲೇಖಿಸಿ, ಶಿವಶಂಕರ ಭಾವಗಳೆರಡೂ ಒಂದಾದ ಹಾಗೆ, ಕನ್ನಡಿಯಲ್ಲಿ ಪ್ರತಿಬಿಂಬ ಕಂಡ ಹಾಗೆ, ದೇವನಿಗೆ ಭಕ್ತನೇ ಭಕ್ತನಿಗೆ ದೇವನು ಜ್ಞಾನಾಗ್ನಿಯಂತೆ ತೋರಿದನು. ಶಂಕರ ದಾಸಿಮಯ್ಯನು ಹಣೆಗಣ್ಣಿನ ಹಾಗೆ ಜ್ಞಾನಾಗ್ನಿಯನ್ನು ಹೊಂದಿದನು.

ಚೆನ್ನಬಸವಣ್ಣನವರು ಶಂಕರದಾಸಿಮಯ್ಯನ ಪವಾಡ ಸದೃಶ ಕಾರ್ಯವನ್ನು ಈ ರೀತಿ ಉಲ್ಲೇಖಿಸಿದ್ದಾನೆ. 'ಜಂಗಮ ಲಿಂಗವ ದೈವವೆಂಧಾರಾಧಿಸಿ ನಮ್ಮ ಶಂಕರ ದಾಸಿಮಯ್ಯಗಳು ಸರ್ವಭೂತಗಳ ಕೈಯಲ್ಲಿ ಕೊಟ್ಟಾವ ಕುಟಿಸಲಿಲ್ಲವೇ' ಎಂದು ಹೇಳಿದ್ದಾನೆ.

> ಅನುಭಾವವೆಂಬುದು ಸತ್ತ ಬಳಿಕ ಪಡೆಯುವ ಮುಕ್ತಿಯಲ್ಲ. ಈ ಲೋಕದಲ್ಲಿ ಇದ್ದೂ ಇಲ್ಲದ ಹಾಗೆ ಬಾಳುವ ರೀತಿ. ಸ್ಫಟಿಕದೊಳಗಣ ಘಟಪ್ರಭೆಯಂತೆ. -ಡಾ. ಎಚ್. ತಿಪ್ಪೇರುದ್ರಸ್ವಾಮಿ.





ಮಡಿವಾಳ ಮಾಚಿದೇವರು, ಕ್ರಾಂತಿ ವಿಫಲವಾದ ನಂತರ 'ಏಳುನೂರೆಪ್ಪತ್ತು ಅಮರಗಣಂಗಳ ದಂಡು ಕೈಲಾಸಕ್ಕೆ ನಡೆಯಿತ್ತು' ಬಂದ ಮಣಿಹ ಪೂರೈಸಿತ್ತು' ಎಂಬಲ್ಲಿ ಶಂಕರ ದಾಸಿಮಯ್ಯನವರ ಹೆಸರನ್ನು ದಾಖಲಿಸಿದ್ದಾರೆ.

ಆಯ್ದಕ್ಕಿ ಲಕ್ಕಮ್ಮ 'ಶಂಕರದಾಸಿಮಯ್ಯನ ಪ್ರಸಾದವ ಕೊಂಡು ಎನ್ನ ಮನಶುದ್ಧವಾಯಿತ್ತಯ್ಯ' ಎಂದು ಪ್ರಸಾದಿಸ್ಥಲವನ್ನು ಏರಿದ ಮಹತ್ವದ ಸಂಗತಿಯನ್ನು ಪರೋಕ್ಷವಗಿ ಹೇಳಿದ್ದಾಳೆ.

ಶರಣ ಹಾವಿನಹಾಳ ಕಲ್ಲಯ್ಯ ಎನ್ನ ಕಷಯಲಿ ಸ್ವಾಯತವಾದನಯ್ಯ ಶಂಕರದಾಸಿಮಯ್ಯ ಎಂದು ಸ್ತುತಿಸಿದ್ದಾನೆ.

ಶಂಕರದಾಸಿಮಯ್ಯನವರ ಹುಟ್ಟೂರಾದ ಕಂದಗಲ್ಲ (ಹುನಗುಂದ ತಾ.) ನಲ್ಲಿ ೧೧ನೇ ಶತಮಾನದ ಶಂಕರಲಿಂಗ ದೇವಸ್ಥಾನ ಶಿಥಿಲವಾಗಿದೆ. ಭಿಕ್ಷಾನ್ನದಿಂದ ಜೀವಿಸಿ ನವಿಲೆಯಲ್ಲಿ ಲಿಂಗೈಕ್ಯರಾದ ಶಂಕರದಾಸಿಮಯ್ಯ ಮಡದಿ ಪುತ್ರ ಸದ್ಯೋಜಾತರು ಜಡೆಯಶಂಕರಲಿಂಗದ ಆರಾಧಕರಾಗಿದ್ದರು. ಈಗ ಸರಕಾರ ಹೊಸ ನವಿಲೆಯಲ್ಲಿ (ಬಸವಸಾಗರ ಜಲಾಶಯದಲ್ಲಿ ನವಿಲೆ ಮುಳುಗಡೆ ಹೊಂದಿದ್ದರಿಂದ) ಜಡೆಯ ಶಂಕರ ಲಿಂಗ ದೇವಸ್ಥಾನ ನಿರ್ಮಿಸಿದೆ. ಆದರೂ ಜಲಾವೃತವಾಗಿರುವ ಮೂಲ ದೇವಸ್ಥಾನದಲ್ಲಿ ಪ್ರತಿ ಶಿವರಾತ್ರಿ ಉತ್ಸವ ಜರುಗುತ್ತದೆ. ☆

> **'ಸಿದ್ಧಗಂಗಾ' ಮಾಸಪತ್ರಿಕೆ ಚಂದಾದಾರರಲ್ಲಿ ಮನವಿ**
>
> ೨೦೧೩ರ ನಿಮ್ಮ ವಾರ್ಷಿಕ ಚಂದಾ ಅವದಿ ಮುಗಿದಿರುವ ಸದಸ್ಯರುಗಳು ೨೦೧೪ನೇ ಸಾಲಿಗೆ ನವೀಕರಿಸಿಕೊಳ್ಳಬೇಕಾಗಿ ವಿನಂತಿ.
>
> ನಿಮ್ಮ ವಿಳಾಸ ಬದಲಾವಣೆ ಆದ ಕೂಡಲೆ ಹೊಸ ವಿಳಾಸವನ್ನು ಚಂದಾ ನಂಬರ್ ತಪ್ಪದೇ ಸೂಚಿಸಿ ಈ ಕೆಳಕಂಡ ವಿಳಾಸಕ್ಕೆ ಪತ್ರ ಮೂಲಕ ತಿಳಿಸಬೇಕಾಗಿ ನಮ್ರ ವಿನಂತಿ.
>
> ವಾರ್ಷಿಕ ಚಂದ ರೂ. ೨೦೦/– ಆಜೀವ ಚಂದಾ ರೂ. ೧೫೦೦/– 'ಸಿದ್ಧಗಂಗಾ' ನಿಮ್ಮ ಮನೆ ನಿರಂತರವಾಗಿ ಬೆಳಗಲು ಆಜೀವ ಸದಸ್ಯತ್ವ ಪಡೆಯಿರಿ. ಚಂದಾ ಹಣವನ್ನು ಈ ವಿಳಾಸಕ್ಕೆ ಕಳುಹಿಸಿರಿ.
>
> **ಪ್ರಕಾಶಕರು**
>
> 'ಸಿದ್ಧಗಂಗಾ' ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ –೫೭೨ ೧೦೪.

॥ ಓಂ ಶ್ರೀ ಗುರುಬಸವಲಿಂಗಾಯನಮಃ ॥

## ವಿನಮ್ರ ಮನವಿ

ನಮ್ಮ ಗುರುವರೇಣ್ಯರೂ, ಶ್ರೀ ಸಿದ್ಧಗಂಗಾ ಮಠದ ಕಾರಣಿಕ ಪುರುಷರೂ, ಕರ್ನಾಟಕರತ್ನ ತ್ರಿವಿಧದಾಸೋಹ ಮೂರ್ತಿಗಳು ಆದ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ಶತಸಂವತ್ಸರಗಳನ್ನು ಕ್ರಮಿಸಿ ಇದೀಗ 107 ವರ್ಷಗಳ ಸೇವಾಪಥದಲ್ಲಿ ಮುನ್ನಡೆದಿರುವುದು ನಾಡಿನ ಸಮಸ್ತ ಮಹಾಜನತೆಗೆ ತಿಳಿದುದೇ ಆಗಿರುತ್ತದೆ. ಪೂಜ್ಯಪಾದರು ಆರೋಗ್ಯವಾಗಿದ್ದಾರಾದರೂ ವಯೋಧರ್ಮದಿಂದಾಗಿ ಪ್ರವಾಸ, ಪ್ರಯಾಣಗಳನ್ನು ಮಾಡುವಲ್ಲಿ ಹೆಚ್ಚು ಶ್ರಮವಾಗುತ್ತಿದ್ದು, ತಮ್ಮ ಆಯಾಸವನ್ನು ವ್ಯಕ್ತಪಡಿಸುವುದಿಲ್ಲ ಹಾಗೂ ಆ ನೋವನ್ನು ಅವರೇ ಅನುಭವಿಸುತ್ತಿದ್ದಾ ರೆಂಬುದನ್ನು ಅನಿವಾರ್ಯವಾಗಿ ಭಕ್ತಾದಿಗಳ, ಅಭಿಮಾನಿಗಳ ಹಾಗೂ ಹಳೆಯ ವಿದ್ಯಾರ್ಥಿಗಳ ಗಮನಕ್ಕೆ ತರಲಾಶಿಸುತ್ತ, ಪೂಜ್ಯಪಾದರನ್ನು ಸಭೆ ಸಮಾರಂಭಗಳಿಗಾಗಲೀ, ಅಹ್ವಾನಿಸಬಾರದಾಗಿ ಯಾವುದೇ ಸಂದರ್ಭದಲ್ಲಾದರೂ ಪೂಜಾದಿಕಾರ್ಯಗಳಿಗಾಗಲೀ, ಸಭೆ ಸಮಾರಂಭಗಳಿಗಾಗಲೀ ಅಹ್ವಾನಿಸಬಾರದಾಗಿ ಆಶಿಸುತ್ತೇವೆ. ಸೇವಾಕಾಂಕ್ಷಿಗಳು ಶ್ರೀಮಠಕ್ಕೆ ಬಂದು ದರ್ಶನಾಶೀರ್ವಾದಗಳನ್ನು ಪಡೆದುಕೊಳ್ಳುವಿರಾಗಿ ನಂಬಿರುತ್ತೇವೆ. ಶ್ರೀಗಳವರಿಗೆ ವಿಶ್ರಾಂತಿ ಅತ್ಯಗತ್ಯವಾಗಿರುತ್ತದೆ ಎಂದು ತಿಳಿಸುತ್ತಾ ಎಲ್ಲರ ಸಹಕಾರವನ್ನು ನಿರೀಕ್ಷಿಸುತ್ತೇವೆ.

ಸಂಪಾದಕರು
ಸಿದ್ಧಗಂಗಾ ಮಾಸಪತ್ರಿಕೆ

# ಅಂತರಂಗದ ಜ್ಞಾನಕ್ರಿಯೆಯಲ್ಲಿ ರೂಪುಗೊಳ್ಳಬೇಕು

-ಆರ್.ಬಿ. ಚಿಲುಮಿ *

'ಕಾಯಕವ ಮಾಡಿದವನು ನಾಯಕನಾದನು' ಎಂಬುದೊಂದು ಗಾದೆ. ಇದು ಶರಣರಾಡಿದ ಮಾತಂದೆನಿಸುತ್ತದೆ. ಕಾಯಕವೇ ಕೈಲಾಸವೆಂದರು ಬಸವಣ್ಣ; ದೇಹವನ್ನು ದಂಡಿಸಿ, ದುಡಿದು, ಕಾಯಕ ಮಾಡಿ ತಾನುಂಡು, ಲಿಂಗದೇವನಿಗೆ ಮೊದಲು ಅರ್ಪಿಸಿ, ಜಂಗಮರಿಗೆ ದಾಸೋಹಗೈಯ್ಯಬೇಕೆಂಬುದು ಶರಣರ ಸಿದ್ಧಾಂತ. ಅದು ಅಂತರಂಗ-ಬಹಿರಂಗ ಶುದ್ಧಿಯಿಂದ ಕೂಡಿದ ಕಾಯಕವಾದುದಾದರೆ ಹಸನಾದ ಬದುಕಾಗುತ್ತದೆಯೆಂಬುದು ಶರಣರ ಆಶಯ. ದೇಹ ದಂಡಿಸಿ, ಬಳಲಿಸಿ, ನಿಷ್ಠೆಯಿಂದ ದುಡಿದುಣ್ಣುವ(ಊಟ) ಪ್ರಸಾದ ರುಚಿಸುತ್ತದೆ. ತಾನೊಬ್ಬನೇ ಉಣ್ಣದೇ ಪರರಿಗೂ ಉಣಬಡಿಸಬೇಕೆಂಬುದನ್ನು ಜಾರಿಗೊಳಿಸಿದವರು ಬಸವಾದಿ ಪ್ರಮಥರೇ ಮೊದಲಿಗರು. ಆದುದರಿಂದ ಜ್ಞಾನ ಸಂಪಾದನೆಯ ಜೊತೆಜೊತೆಗೆ ಕಾಯಕಯೋಗಿ, ಕರ್ಮಯೋಗಿಯೂ ಆಗಬೇಕೆಂದಿದ್ದಾರೆ. ಕಾಯಕವೆಂಬುದು ದೇಹಕ್ಕೆ ಸಂಬಂಧಿಸಿದ ಕ್ರಿಯಾಶಕ್ತಿಯಾದರೆ; ಅಂತರಂಗದ ಜ್ಞಾನವೂ ಅಂತಃಕರಣದಿಂದ ಉದಿಸಿ ಬರಬೇಕು. ಜ್ಞಾನ ಮತ್ತು ಕ್ರಿಯೆಗಳು ಬೆರೆತಾಗಲೇ ಆತನದು ಸ್ವಚ್ಛಂದವಾದ ಬದುಕಾಗುತ್ತದೆ.

ಕಾಯವನ್ನು ಕಾಯಕ ಮಾಡಿ ಸವೆಯಿಸಬೇಕು. ಕಾಯಕದ ಮಹತ್ವವನ್ನು ಅರಿತು ಆಯ್ದಕ್ಕಿ ಮಾರಯ್ಯನಷ್ಟು ಚೆನ್ನಾಗಿ, ಮನಮುಟ್ಟುವಂತೆ ವ್ಯಾಪಕವಾಗಿ ಹೇಳಿದವರು ಶರಣಗಣದಲ್ಲಿಯೇ ವಿರಳರು. ಅವರ ವಚನವಿಂತಿದೆ.

*ಕಾಯಕದಲ್ಲಿ ನಿರತನಾದಡೆ, ಗುರುದರುಶನವಾದರೂ*
*ಮರೆಯಬೇಕು. ಲಿಂಗಪೂಜೆಯಾದಡೂ*
*ಮರೆಯಬೇಕು, ಜಂಗಮ ಮುಂದಿದ್ದರೂ ಹಂಗು*
*ಹರಿಯಬೇಕು, ಕಾಯಕವೇ ಕೈಲಾಸವಾದ ಕರಣ,*
*ಅಮರೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳಗು.*
-ಆಯ್ದಕ್ಕಿ ಮಾರಯ್ಯ

ಈ ಜಗತ್ತು ಕ್ರಿಯಾಶಕ್ತಿಯಿಂದಲೇ ಆಗಿರುವಂಥಹದ್ದು. ಕ್ರಿಯಾಶಕ್ತಿ ಸೃಷ್ಟಿಯಲ್ಲಿ ನಿರಂತರವಿರುತ್ತದೆ. ಕ್ರಿಯಾಶಕ್ತಿ ನಿಂತರೆ ಸೃಷ್ಟಿಯ ಅಂತ್ಯವಾದ ಹಾಗೆ. ಕಾರಣ ವಚನಕಾರರು ಕಾಯಕವನ್ನು ದೈವಕ್ಕಿಂತ ದೊಡ್ಡದಾಗಿ ಕಂಡರು. ಕಾಯಕ ಕ್ರಿಯೆಗೆ ಸಂಬಂಧಪಟ್ಟಂತೆ ಜೀವನ ಮೌಲ್ಯಕ್ಕೂ ಸಂಬಂಧಪಟ್ಟಿದೆ. ಸತ್ಯಶುದ್ಧವಿಲ್ಲದುದು ಕಾಯಕವಲ್ಲವೆಂದು ಕಾಳವ್ವೆಯೆಂಬ ಶರಣೆಯು ನುಡಿದಿದ್ದಾಳೆ. ನಮ್ಮ ಪೂರ್ವಜರು, ಅಂದರೆ ಜನಪದರೂ ಪೂಜೆಗಿಂತ ಕಾಯಕಕ್ಕೇ ಮಹತ್ವ ಕೊಟ್ಟಿರುವರು. ಕೇವಲ ನಾನು ಬ್ರಹ್ಮಜ್ಞಾನಿ, ಜ್ಞಾನವನ್ನು ತಿಳಿದುಕೊಂಡವನೆಂದು ಸುಮ್ಮನೇ ತಪ, ಅನುಷ್ಠಾನ ಮಾಡಿದೊಡೆ ಪ್ರಯೋಜನಕ್ಕೆ ಬಾರದು! ಅದು ಕಾಯಕದಿಂದ ಪ್ರಸರಣಗೊಳ್ಳಬೇಕು. ಅರ್ಚನೆ ಪೂಜೆ, ಜಪ, ತಪ ನಿತ್ಯ ನೇಮಗಳಿಂದ ಬಂದುದು ಆಹಾರವಲ್ಲ; ಅದು ಕೇವಲ ದೇಹಾರವೆನಿಸಿಕೊಳ್ಳುತ್ತದೆ. ಕಾಯಕ ಮಾಡಿಯೇ ಗಳಿಸಬೇಕು, ಬಳಸಬೇಕೆಂಬುದು ಶರಣರ ನಿಲುಮೆ; ಇದಕ್ಕೆ ಪೂರಕವೆಂಬಂತೆ ಚೆನ್ನಬಸವಣ್ಣನವರು ತಮ್ಮದೊಂದು ವಚನದಲ್ಲಿ ಹೇಳಿದ್ದು ಹೀಗೆ-

*ಅಂತರಂಗದಲ್ಲಿ ಅರಿವಾದಡೇನಯ್ಯಾ-ಬಹಿರಂಗದಲ್ಲಿ*
*ಕ್ರೀಯಿಲ್ಲದನ್ನಕ್ಕ ದೇಹವಿಲ್ಲದಿರ್ದಡೆ*
*ಪ್ರಾಣಕ್ಕಾಶ್ರಯವುಂಟೇ? ಕನ್ನಡಿಯಿಲ್ಲದಿರ್ದಡೆ ತನ್ನ*
*ಮುಖವ ಕಾಣಬಹುದೇ. ಸಾಕಾರ ನಿರಾಕಾರ*
*ಏಕೋದೇವ ನಮ್ಮ ಕೂಡಲಚೆನ್ನಸಂಗಯ್ಯನು.*

ಮನಸ್ಸಿನಲ್ಲಿ ಬಹಳ ತಿಳಿದುಕೊಳ್ಳುತ್ತೇವೆ. ಅಂತರಂಗದಲ್ಲಿ ಸಾಕಷ್ಟು ಜ್ಞಾನವನ್ನು ಸಂಪಾದಿಸಿಕೊಳ್ಳುತ್ತೇವೆ. ಈ ಜ್ಞಾನವು ಬಹಿರಂಗದಲ್ಲಿ ಕ್ರಿಯಾರೂಪದಲ್ಲಿ ಉಪಯೋಗವಾಗಬೇಕು. ಕ್ರಿಯಾ ಮತ್ತು ಜ್ಞಾನಗಳ ಸಮನ್ವಯವಿರಬೇಕು. ನುಡಿದು ನಡೆಯೊಳಗಾಗದಿದ್ದರೆ ಕೂಡಲ ಸಂಗಮದೇವನೆಂತೊಲಿವೆನಯ್ಯಾ? ನಡೆ-ನುಡಿ ಒಂದಾಗಬೇಕು. ನುಡಿ ಬೇರೆ ನಡೆ ಬೇರೆಯಾಗಬಾರದು. ಹಸಿವು ಆಗಿದೆ ಆಹಾರವಿಲ್ಲ; ಆಹಾರವಿದೆ ಹಸಿವಾಗಿಲ್ಲ, ಹಸಿವು ಆಗಬೇಕು ಆಹಾರವಿರಬೇಕು. ಊಟ ಮಾಡಿದರೆ ದೈಹಿಕ ತೃಪ್ತಿ ಸಿಗುತ್ತದೆ. ಹೇಳುವವರೇ ಹೆಚ್ಚಾಗಿದ್ದಾರೆ, ಮಾಡುವವರೇ ಇಲ್ಲ. ಬರೆಯುವವರು ಹೆಚ್ಚಾಗಿದ್ದಾರೆ ಆದರೆ ಓದುವವರು ಕಡಿಮೆಯಾಗಿದ್ದಾರೆ. ದುಡಿದುಂಡರೆ ಶರೀರಕ್ಕೆ, ಮನಸ್ಸಿಗೆ ಸಂತೃಪ್ತಿ ಇಲ್ಲದಿದ್ದರೆ ಅದು ರುಚಿಸದು, ಋಣದ ಕೂಳು ಎನ್ನಿಸುತ್ತದೆ. ಕಾಯಕ ಮಾಡಿ ಉಣ್ಣುವವರನ್ನು ದೇವನು ಮೆಚ್ಚುತ್ತಾನೆ. ನಾನು ಜ್ಞಾನಿಯಾಗಬೇಕೆಂದು ಆಹಾರ ಸೇವಿಸುವುದನ್ನು ಬಿಟ್ಟು ಮೌನದಲ್ಲಿದ್ದು, ಅನುಷ್ಠಾನವನ್ನು ಅದೆಷ್ಟು ಕಾಲ ಮಾಡಿದರೂ ಪ್ರಯೋಜನವಿಲ್ಲ. ಜ್ಞಾನವು(ಅಂತರಂಗದಲ್ಲಿ) ಸಂದಾಯವಾದರೂ ಅದು ಕ್ರಿಯಾರೂಪದಲ್ಲಿ ಅರಳಬೇಕು.

ಪ್ರಾಣದ ಆಶ್ರಯ ಸ್ಥಾನ ದೇಹ. ದೇಹವೇ ಇರದಿದ್ದರೆ ಪ್ರಾಣಕ್ಕೆ ಆಶ್ರಯವೆಲ್ಲಿ? ದೇಹ ರಚನೆಯಾದ ಮೇಲೆ ತಾಯಿಯ ಗರ್ಭದಲ್ಲಿ ಜೀವ ಸೇರಿಕೊಳ್ಳುತ್ತದೆ. ದೇಹ-ಪ್ರಾಣಗಳ ಸಮನ್ವಯವಿದ್ದು; ಆತ್ಮದ ಅರಿವಿದ್ದವನು ದೇವಮಾನವನಾಗುತ್ತಾನೆ. ಆತ್ಮದ ಅರಿವು ಇರಲಾರದವನು ದೇಹ ಮಾನವನಾಗುತ್ತಾನೆ. ಬೇರೆಯವರ ಮುಖವನ್ನು ನಾವು ನೋಡಬಹುದು. ಆದರೆ ನಮ್ಮ ಮುಖ ನಮಗೇ ಕಾಣಲಾರದು. ನಮ್ಮ ಮುಖ ಕಾಣಬೇಕಾದರೆ ಕನ್ನಡಿಯ ಸಹಾಯ ಬೇಕಾಗುತ್ತದೆ. ಇಷ್ಟಲಿಂಗವೇ ಕನ್ನಡಿಯಿದ್ದಂತೆ. ಆತ್ಮದ ಅಸ್ತಿತ್ವವನ್ನು ಕಾಣಲು(ಲಿಂಗದೇವ ಬೇಕು) ದೇಹ ಬೇಕೇ ಬೇಕು. ದೇಹದ ಮುಖಾಂತರವೇ ಎಲ್ಲ ಸಾಧನೆಗಳನ್ನು ಮಾಡಿಕೊಳ್ಳುತ್ತೇವೆ. ದೇಹವನ್ನು ಕಾಣಲು ದೇಹ ಒಂದು ಮಾಧ್ಯಮ. ಎಲ್ಲ ಕ್ರಿಯೆಗಳಿಗೆ ದೇಹವನ್ನೇ ಬಳಸುತ್ತೇವೆ. ಅದಕ್ಕಾಗಿ ಇದು ಪ್ರಸಾದ ಕಾಯವೆನ್ನುವರು. ಪ್ರಸಾದ ಕಾಯವಿದನು ಕೆಡಿಸಲಾಗದು ಎಂದಿದ್ದಾರೆ ಬಸವಣ್ಣ.

ದೇವನೊಬ್ಬ ನಾಮಹಲವು ಎಂಬಂತೆ ಆತ ಸಾಕಾರನು, ನಿರಾಕಾರನೂ ಇದ್ದಾನೆ. ನಾವೇ ವಿವಿಧ ಭಂಗಿಯಲ್ಲಿ ಆತನ ರೂಪ-ಆಕಾರಗಳನ್ನಾಗಿ ಮಾಡಿ ಪೂಜೆ, ಪ್ರಾರ್ಥನೆ ಸಲ್ಲಿಸುತ್ತೇವೆ. ಹಾಗೆ ನೋಡಿದರೆ ದೇವರಿಗೆ ರೂಪ, ಆಕಾರವಿಲ್ಲ. ಆತ ಬಯಲು, ನಿರಾಕಾರನೂ ಪರಬ್ರಹ್ಮನು. ಆದರೆ ಪ್ರತಿಯೊಂದು ಜೀವಿಯನ್ನು ಸಾಕಾರ ರೂಪದಲ್ಲಿ ಕಾಣುತ್ತೇವೆ. ಈ ಜೀವಿಗಳ ಹುಟ್ಟಿಗೆ ದೇವರೇ ಕಾರಣ. ಏನಾದರೊಂದು ಸತ್ಕಾರ್ಯವನ್ನು ನಮ್ಮಿಂದ ಆಗುವುದಿದ್ದರೆ ಆತನು ಕನಸಿನಲ್ಲಿ ಬಂದು ಸೂಚನೆ ಕೊಡುತ್ತಾನೆ. ಅದು ಅವರವರ ಪೂಜೆ, ಪ್ರಾರ್ಥನೆ, ಧ್ಯಾನ, ಧಾರಣ ಸಮಾಧಿಸ್ಥಿತಿಯನ್ನು ಅವಲಂಬಿಸಿರುತ್ತದೆ. ದೇವರು ಸದಾ ಸೂಚನೆ ಕೊಡುತ್ತಾ ಇರುತ್ತಾನೆ.

ಅಪಾರವಾದ ಜ್ಞಾನವಿದ್ದವರು ಕ್ರಿಯಾರೂಪಕ್ಕೆ ತರದಿದ್ದರೇನು ಪ್ರಯೋಜನ? ಒಬ್ಬ ವೈದ್ಯನಿದ್ದಾನೆಂದರೆ ಆತನಲ್ಲಿ ವೈದ್ಯಕೀಯ ಜ್ಞಾನ ಅಪಾರವಾಗಿರುತ್ತದೆಂದರೆ ಅದು ರೋಗಿಗಳ ರೋಗ ನಿವಾರಣೆ ಮಾಡಲಿಕ್ಕೆ ಕ್ರಿಯೆಯಾಗಬೇಕು. ಅಂದಾಗ ಆ ವೈದ್ಯನಿಗೆ ಬೆಲೆ, ಜ್ಞಾನಕ್ಕೂ ಬೆಲೆ ಬಂದಂಗಾಗುತ್ತದೆ. ಬಸವಾದಿ ಶಿವಶರಣರು ಸಮಾಜದ ವೈದ್ಯರಾಗಿದ್ದರು. ಸಮಾಜದ ಓರೆ-ಕೋರೆಗಳನ್ನು ಸರಿಪಡಿಸಲು ಬಂದ ನುರಿತ ವೈದ್ಯರೇ ಅವರಾಗಿದ್ದರು. ೧೨ನೆಯ ಶತಮಾನದಲ್ಲಿ ಒಬ್ಬ ವೈದ್ಯ ಸಂಗಣ್ಣನೆಂಬ ಶ್ರೇಷ್ಠ ಶರಣನೂ ಇದ್ದ. ಆತ ಶರಣರ ಅದೆಷ್ಟೋ ಕಾಯಿಲೆಗಳನ್ನು ನಿವಾರಣೆ ಮಾಡಿದ ಉಲ್ಲೇಖವಿದೆ. ಆತನ ವಚನಗಳಲ್ಲಿ ಕಾಣಬಹುದು. ನಾಗರಪಂಚಮಿಗೆ ಕಲ್ಲು ನಾಗರನಿಗೆ ಹಾಲೆರೆದು ಹಾಳು ಮಾಡುವುದು ತಪ್ಪು. ಅದೇ ಹಾಲನ್ನು ಬಡಮಕ್ಕಳಿಗೆ ಕುಡಿಸಿದರೆ ಅವರು ಆರೋಗ್ಯವಂತರಾದಾರು ಯಾವುದೇ ಆಹಾರ ಪದಾರ್ಥಗಳನ್ನು ಕೆಡಿಸಬಾರದು. ತಟ್ಟೆಯಲ್ಲಿ ಪ್ರಸಾದ (ಅನ್ನ)ವನ್ನು ಬಿಟ್ಟು ಕೈತೊಳೆಯಬಾರದು. ಒಂದಗಳು ಬಿಡದೇ ಸೇವಿಸಬೇಕು. ನಮಗೆ ಎಷ್ಟು ಬೇಕೋ ಅಷ್ಟೇ ನೀಡಿಸಿಕೊಂಡು ತಟ್ಟೆಯನ್ನೂ ತೊಳೆದು ಕುಡಿಯಬೇಕು. ಇದರಿಂದ ಸ್ವಲ್ಪಮಟ್ಟಿಗಾದರೂ ಆಹಾರ ಸಮಸ್ಯೆ ನೀಗೀತು, ಅಲ್ಲವೇ? ಪಂಚ ಮಹಾಭೂತಗಳನ್ನು ಸಮಂಜಸ ಮತ್ತು ಸರಿಯಾಗಿ ಉಪಯೋಗಿಸುವಂತಾಗಬೇಕು. ಕ್ರಿಯೆಯೇ ಜ್ಞಾನ, ಜ್ಞಾನವೇ ಕ್ರಿಯೆಯಾಗಬೇಕು. ಸ್ವಾಮಿಯಾಗಲಿ, ಜಂಗಮನಾಗಲಿ, ಭಕ್ತನಾಗಲಿ, ಅಧಿಕಾರಿಯಾಗಲಿ,

* 'ಹೊಂಬೆಳಕು', ಮನೆ ನಂ. ೦೩, ಓಂ ಸ್ಕೂಲ್ ಹತ್ತಿರ, ಜಲದರ್ಶಿನಿ ನಗರ, ಧಾರವಾಡ-೫೮೦ ೦೦೩.

ಜೀವನವೆನ್ನುವುದು ಎಲ್ಲ ಶಾಸ್ತ್ರಗಳನ್ನು ಸಿದ್ಧಾಂತಗಳನ್ನು, ಸೂತ್ರಗಳನ್ನು ಮೀರಿ ನಿಲ್ಲುವಂಥದ್ದು.
-ಜಿ.ಪಿ. ಅಶೋಕ

ಮಂತ್ರಿಯಾಗಲಿ, ರಾಜನಾಗಲಿ, ಪ್ರಜೆಯಾಗಲಿ ಸ್ವತಃ ದುಡಿದೇ ಕಾಯಕ ಮಾಡಿಯೇ ಸವಿಯಬೇಕು. ಹೀಗೆ ಮಾಡುವುದರಿಂದ ಶರೀರ ಸ್ವಾಸ್ಥ್ಯ ಕಾಪಾಡಿದಂತಾಗುತ್ತದೆ. ದೇಶದ ಅಭಿವೃದ್ಧಿಯೂ ಆಗುತ್ತದೆ.' ಜ್ಞಾನ ಮತ್ತು ಕ್ರಿಯೆಗಳ ಸಿದ್ಧಾಂತವೇ ಲಿಂಗಾಯತ. ಧರ್ಮದ ತಳಹದಿ. ಧರ್ಮವನ್ನು ತಿಳಿಯಬೇಕು, ತಿಳಿದಂತೆ ಆಚರಿಸಬೇಕು. ಅರಿವು-ಆಚಾರ ಅಂದರೆ ಜ್ಞಾನ-ಕ್ರಿಯೆಗಳೇ ಜೀವನಕ್ಕೆ ಸಹಕಾರಿಗಳು.. ಮೊದಲು ತಿಳಿದುಕೊಳ್ಳಬೇಕು. ತಿಳಿಯುತ್ತಿದ್ದಂತೆಯೇ ಕಾರ್ಯ ರೂಪಕ್ಕೆ ತರಬೇಕು. 'ನುಡಿದಂತೆ ನಡೆದರೆ ಇದೇ ಜನ್ಮ ಕಡೆ' ಎಂದು ಶರಣರು ಸಾರಿದ್ದಾರೆ. ಜ್ಞಾನದಲ್ಲಿ ಸಂಪನ್ನರು-ಕ್ರಿಯೆಯಲ್ಲಿ ಸಮರ್ಥರು- ನಮ್ಮ ಶರಣರು. 'ಆಡದೇ ಮಾಡುವವನು ರೂಢಿಯೊಳಗುತ್ತಮನು, ಆಡಿ ಮಾಡುವವನು ಮಧ್ಯಮನು, ಆಡಿಯೂ ತಾ ಮಾಡದವನು ಅಧಮನು' ಎಂಬುದಾಗಿ ಸರ್ವಜ್ಞನೂ ಹೇಳಿರುವನು. ಈಗ ಜಗತ್ತಿನಲ್ಲಿ ಆಡುವವರೇ, ಜಾಣರೇ ಹೆಚ್ಚಾಗಿದ್ದಾರೆ. ಆದರೆ ಕ್ರಿಯಾಶೀಲರು ಸಿಗುವುದು ವಿರಳರು. ಉಪದೇಶವನ್ನು ಧಾರಾಳವಾಗಿ ಮಾಡುವವರು ಬಹಳ ಮಂದಿ! ಯಾರು ಉಪದೇಶ ಮಾಡುತ್ತಾರೋ ಅವರೇ ಅಪರಾಧ ಮಾಡಿದಾಗ, ಜ್ಞಾನ-ಕ್ರಿಯೆಗಳ ಸಮನ್ವಯ ಹೇಗಾಗುತ್ತದೆ? ಅಂತರಂಗದ ಜ್ಞಾನ ಬಹಿರಂಗದ ಕ್ರಿಯೆಗೊಳಪಟ್ಟಾಗ ಅದರ ನಿಜವಾದ ರಚನಾತ್ಮಕ ಫಲಿತಾಂಶ ಹೊರಬರುತ್ತದೆ. ಆದುದರಿಂದ ಎಲ್ಲರೂ ಕ್ರಿಯಾಶೀಲರಾದರೆ ದೇಶದ ಭವಿಷ್ಯ ಉಜ್ವಲವಾಗುತ್ತದೆಂಬುದರಲ್ಲಿ ಸಂದೇಹವೇ ಇಲ್ಲ.

'ಘನಹೀನವಳಿದು ಕರೆದುಣುದವನೂಟ ಶುನಕ ತಿಂದಂತೆ' ಎಂಬ ಸರ್ವಜ್ಞನ ವಚನದ ಸಾಲುಗಳು ಮತ್ತು ಬಸವಣ್ಣನವರ 'ಸೋಹಂ ಎಂದೆನಿಸದೆ ದಾಸೋಹಂ ಎಂದೆನಿಸಯ್ಯಾ' ಎಂಬ ಮಾತುಗಳನ್ನು ನಾವಿಂದು ಕಾರ್ಯ ರೂಪಕ್ಕೆ ತರಬೇಕಾಗಿದೆ.

ಕಾಯಕದ ಭಕ್ತನ ಆಯತವ ನೋಡಿರೋ
ಕಾಯಕವ ಬಿಟ್ಟ ಮರುದಿನ ಕಪ್ಪುರದ
ಕಾಯಕವೆ ಬಪ್ಪು ಸರ್ವಜ್ಞ.

ಅಂದರೆ ಯಾರೇ ಆಗಲಿ ನಿರಂತರವಾಗಿ ಕಾರ್ಯತತ್ಪರನಾಗಿರುವವರು ದೈಹಿಕವಾಗಿ ಮತ್ತು ಮಾನಸಿಕವಾಗಿ ಆರೋಗ್ಯವಂತರಾಗಿರುತ್ತಾರೆ. ಕೆಲಸವನು ಮರೆತ ಮರುದಿನ ಆತ ಸುಟ್ಟ ಕರ್ಪೂರದಂತಾಗುತ್ತಾನೆಂದಿದ್ದಾನೆ ಕವಿ ಸರ್ವಜ್ಞ. ಕಾಯಕ ಮಾಡುವಾತ ಅಹಂಕಾರದಿಂದ ವರ್ತಿಸುವುದು ಸಲ್ಲದು. ಕಾಯಕವೊಂದು ಧರ್ಮವೆಂದು ತಿಳಿದುಕೊಳ್ಳಬೇಕು. ಹಿಂಸಾಮೂಲವಲ್ಲದ ಮತ್ತು ಸಮಾಜಕ್ಕೆ ಒಳಿತಾಗುವ ತನ್ಮೂಲಕ ಸನ್ಮಾರ್ಗದ ಕಡೆಗೆ ಕೊಂಡೊಯ್ಯುವ ಯಾವ ಉದ್ಯೋಗವನ್ನಾದರೂ ಕೈಗೊಳ್ಳಬಹುದು. 'ಕೆಲಸವೇ ಜೀವನ, ಇದು ಕೇವಲ ಮಾರಾಟಕ್ಕಿಟ್ಟ ಆರ್ಥಿಕ ಸಂಪನ್ಮೂಲವಲ್ಲ. ದುಡಿಮೆಯ ಆದಾಯವು ಸಾಮೂಹಿಕ ಉತ್ಪನ್ನದ ನ್ಯಾಯಯುತ ಅನುಭೋಗ ವಾಗಬೇಕೇ ಹೊರತು ಬೇಡಿಕೆ ಮತ್ತು ಪೂರೈಕೆಗಳ ನಡುವೆ ನಡೆಯುವ ಪಾರಸ್ಪರಿಕ ಕ್ರಿಯೆಯ ಮೂಲಕ ನಿಗದಿಯಾದ ಕೇವಲ ಕ್ರಮವಿಕ್ರಯವಾಗಿರಕೂಡದು ಎಂದು ಹೇಳಿದ ಮಹಾತ್ಮಾ ಗಾಂಧೀಜಿಯವರ ಮಾತನ್ನಿಲ್ಲಿ ಸ್ಮರಿಸಿ ಕೊಳ್ಳ ಬಹುದು. ಕಾಯವ ಬಳಲಿಸದೆ, ತನು ಕರಗದೆ, ಮನ ನೋಯದೆ ಗಳಿಸುವ ಹಣ ಗುರು-ಲಿಂಗ-ಜಂಗಮ ದಾಸೋಹಕ್ಕೆ ಸಲ್ಲದು ಎಂದಿದ್ದಾರೆ ಶರಣರು. ಕಾಯಕವೇ ಕೈಲಾಸವೆಂದು ಕರ್ತವ್ಯವನ್ನು ಹೂವಿನ ಮಾಲೆಯಂತೆ ಹೊತ್ತು ಬದುಕುವವನ ವಚನದಲ್ಲಿ ಅಲೌಕಿಕ ಕಾಂತಿ ಯೊಂದು ಮಿನುಗುತ್ತಿರುತ್ತದೆ. ☆

### ಶ್ರೀವಾಣಿ

ಧರ್ಮ ಗುಡಿ ಗುಂಡಾರಗಳಲ್ಲಿಲ್ಲ. ಧರ್ಮ ಚರ್ಚು ಮಸೀದಿಗಳಲ್ಲಿಲ್ಲ. ಧರ್ಮ ಇರುವುದು ನಮ್ಮ ದಿನನಿತ್ಯದ ನಡೆನುಡಿಗಳಲ್ಲಿ. ನುಡಿಯಲ್ಲಿ ಎಚ್ಚೆತ್ತು ನಡೆಯಲ್ಲಿ ತಪ್ಪುವುದು ಧರ್ಮವಲ್ಲ. ಜಗತ್ತಿನ ಮಹಾನುಭಾವರ ಸಂದೇಶವೆಲ್ಲ ಇದಕ್ಕಿಂತ ಬೇರೇನೂ ಅಲ್ಲ. ಆತ್ಮಸಾಕ್ಷಾತ್ಕಾರವೇ ಧರ್ಮ. ಧರ್ಮದ ಅಂತರಾರ್ಥವೇ ಆತ್ಮ ಸಾಕ್ಷಾತ್ಕಾರ.

ಗಿಡಕ್ಕೆ ಹೇಗೆ ಬೇರು ಮೂಲಶಕ್ತಿಯ ಕೇಂದ್ರವೋ ಹಾಗೆಯೇ ಪ್ರತಿಯೊಬ್ಬ ಮನುಷ್ಯನಿಗೆ ಸಂಸ್ಕೃತಿ ಅವನ ಶಕ್ತಿಯ ತಾಯಿಬೇರು. -ಡಾ. ಗುರುರಾಜ ಕರ್ಜಗಿ





# ಗುಲ್ಬರ್ಗ ನಗರದಲ್ಲಿ ಆಚರಿಸಿದ ಪೂಜ್ಯರ 107ನೇ ಜನ್ಮದಿನೋತ್ಸವ

ದೊಡ್ಡವರ ಜನ್ಮದಿನೋತ್ಸವದಂದು ಅವರ ಜೀವನವನ್ನು ಅವಲೋಕನ ಮಾಡುವುದರಿಂದ ನಾವೂ ಕೂಡ ಅವರಂತೆ ಉದಾರರಾಗಬೇಕೆಂಬುದನ್ನು ನೆನಪಿಗೆ ತಂದು ಕೊಡುತ್ತದೆ. Lives of greatman all reminds us, we can make our life sublime(longfellow) ಯಾರು ತಮ್ಮ ವೈಯಕ್ತಿಕ ಬದುಕಿನ ಬಗ್ಗೆ ಚಿಂತಿಸದೆ, ಮಾನವ ಕುಲಕಲ್ಯಾಣಕ್ಕಾಗಿ ತ್ರಿಕರಣ ಶುದ್ಧಿಯಾಗಿ ತಮ್ಮ ಜೀವನವನ್ನು ಮೀಸಲಿಟ್ಟು ಜನಸಾಮಾನ್ಯರ ಕಣ್ಣೀರೊರೆಸುವ ಕಾರ್ಯದಲ್ಲಿ ಮಗ್ನರಾಗುತ್ತಾರೋ ಅವರು ದೊಡ್ಡವರು. ಹಿಂದಿಯಲ್ಲಿ 'ಇಸ್ ದುನಿಯಾಮೆ ಬಡಾ ಆದ್ಮಿ ಕೌನ್ ಹೈ?' ಉತ್ತರ : ಜೋ ದೂಸ್‌ರೋಂಕ ದುಃಖ್ ಸಮಜತಾ ಹೈ, ಔರ್ ಉಸಿ ದುಃಖ್ ಕೊ ದೂರ್ ಕರನೇಕೊ ಕೋಶಿಶ್ ಕರತಾ ಹೈ, ವಹಿ ಬಡಾ ಆದ್ಮೀ ಹೂ. ಯಾರು ಇತರರ ದುಃಖವನ್ನು ಅರಿತು ಅವರ ಕಣ್ಣೀರೊರೆಸುವ ಕಾರ್ಯದಲ್ಲಿ ಮಗ್ನರಾಗುವರೋ ಅವರು ದೊಡ್ಡವರು.

ಕೆಲವರು ಹುಟ್ಟುವಾಗಲೇ ದೊಡ್ಡವರಾಗುತ್ತಾರೆ. ಮಹಾತ್ಮರಾಗುತ್ತಾರೆ. (Some are born saint) ಉದಾ: ಉದ್ಧಾನಶಿವಯೋಗಿಗಳು. ಕೆಲವರು ಪ್ರವೃತ್ತಿಪಲ್ಲಟವಾಗಿ ಮಹಾತ್ಮರಾಗುತ್ತಾರೆ (Some achieve saintlyness in later stage) ಉದಾ: ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು. ಇವರು ಶ್ರೀ ಸಿದ್ಧಗಂಗಾಮಠದ ಉತ್ತರಾಧಿಕಾರಿಯಾಗಿ ನೇಮಕವಾದುದ್ದೇ ನಾಡಿನ ಭಾಗ್ಯ. ಅಂತಹ ಅನರ್ಘ್ಯರತ್ನವನ್ನು ನಾಡಿಗೆ ನೀಡಿದ ಉದ್ಧಾನಶಿವಯೋಗಿಗಳ ದೂರದೃಷ್ಟಿಗೆ, ನಾಡು, ಸಮಾಜ, ಋಣಿಯಾಗಿದೆ. ಇಂತಹ ಜಂಗಮಲಿಂಗದ ಸೇವೆ ಸಮಾಜಕ್ಕೆ ಪ್ರಾಪ್ತವಾಗದಿದ್ದಲ್ಲಿ ಲಕ್ಷಾನುಲಕ್ಷ ಬಡ ವಿದ್ಯಾರ್ಥಿಗಳ ಬಾಳು ಗೋಳಾಗುತ್ತಿತ್ತು.

ಅನಾಯಾಸವಾಗಿ ದೊರೆತ ಶ್ರೀ ಸಿದ್ಧಗಂಗಾಮಠದ ಉತ್ತರಾಧಿಕಾರತ್ವವನ್ನು ಸಮರ್ಥವಾಗಿ ಬಳಸಿಕೊಂಡು ಸಮಾಜಸೇವೆಯನ್ನು ಮಾಡುವ ಸಂವಾಹಿನಿಯಾಗಿ ಉದ್ಧಾನ ಶಿವಯೋಗಿಗಳಿಗೆ ಅರ್ಪಿಸಿಕೊಂಡರು. ಗುರುಗಳು ನೀಡಿದ ಕಠಿಣ ಶಿಕ್ಷೆಯನ್ನು ಅಕ್ಕರೆಯಿಂದ ಅಪ್ಪಿಕೊಂಡು ಅವರ ಮನ ಮೆಚ್ಚುವಂತೆ ಹೃದಯ ಮುಟ್ಟುವಂತೆ ಸೇವೆ ಮಾಡಿ, ಅವರ ಪರಿಪೂರ್ಣ ಆಶೀರ್ವಾದ ಪಡೆದುಕೊಂಡು ಸಂತರಾದರು, ಶಿವಯೋಗಿಯಾದರು, ಕಾಯಕ ರೂವಾರಿಯಾದರು. ತ್ರಿವಿಧ ದಾಸೋಹಿಯಾದರು. ಸಂಯಮವನ್ನು ಸಾಧಿಸಿದರು. ಶೀಲಸಂಪನ್ನರಾದರು. ಆಚಾರಕ್ಕೆ ನಿಷ್ಠರಾಗಿ ತ್ರಿಕಾಲಪೂಜೆ ನಡೆಸಿಕೊಂಡು ಬಂದರು. ಸಚ್ಚಾರಿತ್ರ್ಯ ಕಾಪಾಡಿಕೊಂಡು ಕಾವಿಗೆ ಗೌರವ ತಂದು ಮಠಾಧಿಪತಿಗಳಿಗೆ ಆದರ್ಶರಾದರು. ಹೀಗೆ ೮೫ ವರ್ಷಗಳು ಸುದೀರ್ಘ ಮನುಕುಲದ ಸೇವೆ ಮಾಡಿ ಲಕ್ಷಾನುಲಕ್ಷ ವಿದ್ಯಾರ್ಥಿಗಳ ಕಣ್ಣೀರೊರೆಸಿ ಬಾಳಿಗೆ ಬೆಳಕಾದರು. ೧೦೭ನೇ ವಯಸ್ಸಿನಲ್ಲಿ ಪೂಜ್ಯರ ದಿನಚರಿಯಲ್ಲಿ ಯಾವುದೇ ಬದಲಾವಣೆ ಇಲ್ಲ. ಇಂತಹ ಮಹಾತ್ಮರು ನೀಡಿದ ಸೇವೆಗೆ ಕೃತಜ್ಞತೆಯ ಸಂಕೇತವಾಗಿ ಉತ್ತರ ಕರ್ನಾಟಕದ ಭಾಗದ ಗುಲಬರ್ಗ ಜಿಲ್ಲೆಯಲ್ಲೂ ಪೂಜ್ಯರ ೧೦೭ನೇ ಜನ್ಮದಿನೋತ್ಸವವನ್ನು ಮಠದ ಹಳೆ ವಿದ್ಯಾರ್ಥಿಗಳು, ಹಿತೈಷಿಗಳು, ಭಕ್ತರು ಅರ್ಥವತ್ತಾಗಿ ೦೧-೦೪-೨೦೧೪ರಂದು ಆಚರಿಸಿ ಸಂತೋಷದಿಂದ ಸಂಭ್ರಮಿಸಿದರು. ಇದಕ್ಕೆ ಪೂರಕವೆನ್ನುವಂತೆ ಅದರ ವರದಿ ೦೨-೦೪-೨೦೧೪ರಂದು ವಿಜಯ ಕರ್ನಾಟಕದಲ್ಲಿ (ಗುಲ್ಬರ್ಗ ಆವೃತ್ತಿ) ಪ್ರಕಟವಾಗಿದ್ದು ಅದನ್ನು ಯಥಾವತ್ತಾಗಿ ಮುದ್ರಿಸಲಾಗಿದೆ.

### ನಂದಗೋಕುಲದಲ್ಲಿ ಶ್ರೀಗಳ ಜನ್ಮದಿನ ಆಚರಣೆ
### ಸಿದ್ಧಗಂಗಾ ಶ್ರೀ ದಣಿವರಿಯದ ಶ್ರಮಜೀವಿ

ಜ್ಞಾನ ಮತ್ತು ಅನ್ನದಾಸೋಹವನ್ನು ನಿರಂತರವಾಗಿ ಮಾಡಿಕೊಂಡು ಬರುತ್ತಿರುವ ತುಮಕೂರಿನ ಡಾ. ಶಿವಕುಮಾರಮಹಾಸ್ವಾಮಿಗಳು ಸಮಾಜಕ್ಕೆ ನೀಡಿದ ಕೊಡುಗೆ ಹಿರಿದಾಗಿದೆ ಎಂದು ಚೌದಾಪುರಿ ಮಠದ ರಾಜಶೇಖರ ಶಿವಾಚಾರ್ಯರು ನುಡಿದರು.

ಸಿದ್ಧಗಂಗಾ ಹಳೆ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘ ನಗರದ ನಂದಗೋಕುಲದ ಶಿಶುವಿಹಾರ ಮಂದಿರದಲ್ಲಿ ಹಮ್ಮಿಕೊಂಡಿದ್ದ ಡಾ. ಶಿವಕುಮಾರಮಹಾಸ್ವಾಮಿಗಳ

೧೦೭ನೇ ಜನ್ಮದಿನಾಚರಣೆ ಕಾರ್ಯಕ್ರಮದಲ್ಲಿ ಮಾತನಾಡಿದರು.

ಕಳೆದ ಅನೇಕ ವರ್ಷಗಳಿಂದ ರಾಜ್ಯದ ವಿವಿಧ ಮಕ್ಕಳಿಗೆ ತ್ರಿವಿಧ ದಾಸೋಹಗೈಯುತ್ತಾ ಮಕ್ಕಳಲ್ಲಿ ಮಾನವೀಯ ಮೌಲ್ಯಗಳನ್ನು ಬೆಳೆಸುವಂತ ಶಿಕ್ಷಣ ನೀಡುತ್ತಿರುವುದು ಸಿದ್ಧಗಂಗಾ ಮಠವಾಗಿದೆ. ಇಂಥ ಇಳಿ ವಯಸ್ಸಿನಲ್ಲಿಯೂ ಕೂಡ ಶ್ರೀಗಳು ಮಠದ ಏಳ್ಗೆ ಬಗ್ಗೆ ಶ್ರಮಿಸುತ್ತಿದ್ದಾರೆ. ಶ್ರೀಗಳು ದಣಿವಿಲ್ಲದ ಶ್ರಮಜೀವಿ ಎಂದು ಬಣ್ಣಿಸಿದರು. ಇಂತಹ ಸತ್ಪುರುಷರ ಜನ್ಮದಿನವನ್ನು ಆಚರಣೆ ಮಾಡುತ್ತಿರುವುದು ತುಂಬಾ ಹೆಮ್ಮೆಯ ವಿಷಯ ಎಂದರು.

ಭಾರತೀಯ ರೆಡ್ ಕ್ರಾಸ್ ಸಂಸ್ಥೆ ಜಿಲ್ಲಾಧ್ಯಕ್ಷ ಅಪ್ಪಾರಾವ್ ಅಕ್ಕೋಣಿ ಮಾತನಾಡಿ, ಚಿಕ್ಕಂದಿನಿಂದ ಶ್ರೀಮಠದಲ್ಲಿ ಅಭ್ಯಾಸ ಮಾಡಿದ ಎಷ್ಟೋ ವಿದ್ಯಾರ್ಥಿಗಳು ಇಂದು ರಾಷ್ಟ್ರ ಅಂತಾರಾಷ್ಟ್ರೀಯ ಮಟ್ಟದಲ್ಲಿ ಅತ್ಯಂತ ಉನ್ನತ ಹುದ್ದೆ ಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಜಾತ್ಯಾತೀತತೆ, ಶಿಸ್ತು, ಸಂಯಮ, ಬದ್ಧತೆ, ಸಂಸ್ಕೃತಿ, ಮಾನವೀಯ ಮೌಲ್ಯವುಳ್ಳ ಶಿಕ್ಷಣ ನೀಡುವುದರ ಜೊತೆಗೆ ಬದುಕು ಕಟ್ಟಿಕೊಳ್ಳುವ ಕಲೆ ಹೇಳಿಕೊಡುತ್ತಾರೆ. ಹೀಗಾಗಿ ಈ ನಾಡಿನಲ್ಲಿ ಅದೊಂದು ಅದ್ಭುತ ಸಂಸ್ಥೆ ಎಂದು ಹೇಳಿದರು.

ಹಳೆ ವಿದ್ಯಾರ್ಥಿಯೂ ಆಗಿರುವ ಜೈಕರವೇ ಸಂಸ್ಥಾಪಕ ಅರುಣ್‌ಕುಮಾರ್ ಪಾಟೀಲ್ ಮಾತನಾಡಿ, ಸಿದ್ಧಗಂಗಾ ಮಠ ಮಾನವೀಯ ಮೌಲ್ಯಗಳನ್ನು ಕಲಿಸುವುದರ ಜತೆಗೆ ಉತ್ತಮ ಶಿಕ್ಷಣ, ಸಂಸ್ಕಾರಗಳನ್ನು ಮಕ್ಕಳಲ್ಲಿ ಬೆಳೆಸುವ ಮೂಲಕ ಇಡೀ ವಿಶ್ವಕ್ಕೆ ಮಾದರಿಯಾದ ಕೆಲಸವನ್ನು ಮಾಡುತ್ತಿದೆ. ತ್ರಿವಿಧ ದಾಸೋಹ ನಡೆಸುತ್ತಿರುವ ವಿಶಿಷ್ಟವಾದ ಮಠ ಎಂಬ ಶ್ರೇಯಸ್ಸು ಶ್ರೀ ಸಿದ್ಧಗಂಗಾಮಠಕ್ಕೆ ಸಲ್ಲುತ್ತದೆ ಎಂದರು.

ಈ ಸಂದರ್ಭದಲ್ಲಿ ಪ್ರೊ. ಸಂಗಯ್ಯ ಹಿರೇಮಠ, ಪ್ರಮೀಳಾಬಾಯಿ ಡಿಗ್ಗಾವಿ, ಕೃಷ್ಣಾಜಿ ಕುಲಕರ್ಣಿ ಅವರನ್ನು ಸನ್ಮಾನಿಸಲಾಯಿತು. ಖ್ಯಾತ ಉದ್ಯಮಿ ಬಿ.ಜಿ. ಪಾಟೀಲ ಮಾತನಾಡಿದರು. ಜಯತೀರ್ಥ ಕಾಗಲಕರ್, ನ್ಯಾಯವಾದಿ ಆರ್.ವಿ. ನಾಡಗೌಡ, ಎಸ್.ಎಸ್. ಹಿರೇಮಠ, ಡಾ. ಎಸ್.ಎಸ್.ಗುಬ್ಬಿ, ಎಂ.ಬಿ. ಅಂಬಲಗಿ, ವಿಜಯ ಕುಮಾರ ತೇಗಲತಿಪ್ಪಿ, ಹಳೆ ವಿದ್ಯಾರ್ಥಿಗಳಾದ ರುದ್ರಮುನಿ ಪುರಾಣಿ, ಜಗದೀಶ ಹಲಕಟ್ಟಿ ವಿಜಯಕುಮಾರ, ಅಶೋಕ ರಟಕಲ್ ಮತ್ತಿತರರು ಇದ್ದರು. ದೇವೇಂದ್ರಪ್ಪ ಆವಂಟಿ ಸ್ವಾಗತಿಸಿದರು. ಕರಿಬಸವಯ್ಯಸ್ವಾಮಿ ನಿರೂಪಿಸಿದರು. ಚೆನ್ನಬಸವಯ್ಯ ಗಾರಂಪಳ್ಳಿ ವಂದಿಸಿದರು.

**ಸುರಪುರ : ಸಿದ್ಧಗಂಗಾ ಶ್ರೀಗಳ ಜನ್ಮದಿನ ಆಚರಣೆ**

ಇಳಿ ವಯಸ್ಸಿನಲ್ಲಿ ದೇಹ ಕುಗ್ಗಿದರೂ ಮನಸ್ಸು ಕುಗ್ಗದ ಮಗುವಿನ ಮನಸ್ಸು ತುಮಕೂರಿನ ಸಿದ್ಧಗಂಗಾ ಶ್ರೀಗಳದ್ದು ಎಂದು ಡಾ. ಪಂಡಿತ ಪುಟ್ಟರಾಜ ಜನಕಲ್ಯಾಣ ಸೇವಾಸಮಿತಿಯ ತಾಲ್ಲೂಕು ಅಧ್ಯಕ್ಷ ಕ್ಷೀರಲಿಂಗಯ್ಯ ಹಿರೇಮಠ ಹೇಳಿದರು.

ತುಮಕೂರಿನ ಸಿದ್ಧಗಂಗಾಮಠದ ಡಾ. ಶಿವಕುಮಾರ ಸ್ವಾಮೀಜಿ ಅವರ ೧೦೭ನೇ ಹುಟ್ಟುಹಬ್ಬದ ನಿಮಿತ್ತ ಇಲ್ಲಿಯ ಸರಕಾರಿ ಆಸ್ಪತ್ರೆಯಲ್ಲಿ ರೋಗಿಗಳಿಗೆ ಹಣ್ಣು, ಬ್ರೆಡ್ ವಿತರಿಸಿ ಅವರು ಮಾತನಾಡಿದರು.

ಅಗಾಧ ಗ್ರಹಣ ಶಕ್ತಿ ಹೊಂದಿರುವ ಶ್ರೀಗಳು ದೇಶದ ಆಗುಹೋಗುಗಳ ಬಗ್ಗೆ ಹೆಚ್ಚು ಚಿಂತಿಸುವ ಚಿಂತನಶೀಲರು ಪ್ರತಿದಿನದ ವಿದ್ಯಮಾನಗಳ ಮಾಹಿತಿ ಅವರಲ್ಲಿರುತ್ತದೆ. ಒಟ್ಟಾರೆ ದೇಶದ, ನಾಡು-ನುಡಿಯ ನಾಡಿಮಿಡಿತ ಅವರಲ್ಲಿ ಯಾವಾಗಲೂ ಜಾಗೃತವಾಗಿರುತ್ತದೆ.

ತಮ್ಮ ಸನ್ಯಾಸ ಜೀವನದಲ್ಲಿ ಇಷ್ಟು ವರ್ಷಗಳ ಸಾಧನೆಯ ಹಾದಿಯಲ್ಲಿ ಅನೇಕ ಅಡೆತಡೆಗಳು ಬಂದರೂ ಅವನ್ನೆಲ್ಲ ಸ್ಥಿತಪ್ರಜ್ಞರಾಗಿಯೇ ನಿಭಾಯಿಸಿಕೊಂಡು ಬಂದ ವೀರ ಸನ್ಯಾಸಿ. ಹೀಗಾಗಿಯೇ ರಾಜ್ಯ ಮಾತ್ರವಲ್ಲದೇ ಇಡೀ ರಾಷ್ಟ್ರಕ್ಕೆ ಮಾದರಿಯಾಗಿ, ದೇವಸಮಾನರಾಗಿ, ನಡೆದಾಡುವ ದೇವರೆಂದೇ ನಾಮಾಂಕಿತರಾಗಿ ನಮ್ಮೆಲ್ಲರ ನಡುವೆ ದರ್ಶನ ನೀಡುತ್ತಿದ್ದಾರೆ ಎಂದರು.

ಆಸ್ಪತ್ರೆಯ ಮುಖ್ಯ ವೈದ್ಯಾಧಿಕಾರಿ ಡಾ. ನಾಗನಾಥ ಹೆಬಳ, ಕರ್ನಾಟಕ ಪ್ರದೇಶ ಚಲವಾದಿ ಸಂಘದ ತಾಲ್ಲೂಕು ಘಟಕದ ಅಧ್ಯಕ್ಷ ಬಸಯ್ಯ ನಾಟೇಕರ್, ದತ್ತುರಾವ್ ಕುಲಕರ್ಣಿ, ವಿದ್ಯಾಸಾಗರ ಹುಣಸಗಿ, ಡಿ.ಬಿ. ಹಿರೇಮಠ, ನಿಂಗಣ್ಣ ಬುಡ್ಡಾ, ದೇವು ಚನ್ನೂರು, ಹಂಪಯ್ಯ ಹಿರೇಮಠ ಇನ್ನಿತರರಿದ್ದರು. ☆





# ಸಸ್ಯಸಂಜೀವಿನಿ
# ಆರೋಗ್ಯ ನೀಡುವ ಅತ್ತಿಮರ

-ಡಾ|| ಶೈಲೇಶ್ ಎಂ.ಡಿ. *

ಅತ್ತಿಯು ಆರೋಗ್ಯವನ್ನು ನೀಡುವ, ವೇದಕಾಲದಿಂದಲೂ ಪ್ರಚಾರವಿರುವ ಔಷಧೀಯ ಸಸ್ಯಗಳಲ್ಲಿ ಒಂದಾಗಿದೆ. ಅತ್ತಿಮರವು ಧಾರ್ಮಿಕ ಪೂಜೆಗಳಿಗೆ ಒಂದು ಮುಖ್ಯವಾದ ದ್ರವ್ಯ. ಇದರ ರೆಂಬೆಯನ್ನು ಹಿಂದಿನ ಕಾಲದಲ್ಲಿ ಹಲ್ಲುಜ್ಜಲು ಉಪಯೋಗಿಸುತ್ತಿದ್ದರು. ಅತ್ತಿಯ ಹಣ್ಣಿನಿಂದ ತಯಾರಿಸಿದ ಚಟ್ನಿಯಲ್ಲಿ ಊಟ ಮಾಡುವುದೇ ಒಂದು ಸೊಬಗು. ಅದು ಊಟಕ್ಕೆ ರುಚಿಯನ್ನು ಕೊಡುವುದರ ಜೊತೆಗೆ ಮತ್ತಷ್ಟು ತಿನಿಸುವಂತೆ ಮಾಡುತ್ತದೆ. ಅಂತಹ ಅದ್ಭುತವಾದ ರುಚಿಯಿಂದ ಕೂಡಿದ ಅತ್ತಿಯು ಸಾಮಾನ್ಯವಾಗಿ ಎಲ್ಲರಿಗೂ ಪರಿಚಿತ. ಆಹಾರವಾಗಿ ಮಾತ್ರವಲ್ಲದೆ ಅತ್ತಿಯನ್ನು ಔಷಧಕ್ಕೂ ಕೂಡ ಯಥೇಚ್ಛವಾಗಿ ಉಪಯೋಗಿಸುತ್ತಾರೆ. ಹೊರನೋಟಕ್ಕೆ ಅತ್ತಿಯ ಹಣ್ಣು ಸುಂದರವಾಗಿ ಕಂಡರೂ, ಒಳಗಿನ ಹಣ್ಣಿನ ಭಾಗದಲ್ಲಿ ಸೂಕ್ಷ್ಮ ಜಂತುಗಳಿವೆ.

**ಬಹು ಭಾಷಾ ಹೆಸರುಗಳು :**

| | | |
|---|---|---|
| ಕನ್ನಡ | : | ಅತ್ತಿಮರ |
| ಸಂಸ್ಕೃತ | : | ಉದುಂಬರ |
| ತುಳು | : | ಅರ್ತಿ ಮರ |
| ಹಿಂದಿ | : | ಗೂಲರ್ |
| ಇಂಗ್ಲಿಷ್ | : | ಕ್ಲಸ್ಟರ್‌ಫಿಗ್ |

**ಪರ್ಯಾಯ ಪದಗಳು :** ಉದುಂಬರ, ಅಪುಷ್ಪ, ಜಂತುಫಲ, ಸದಾಫಲ, ಶ್ವೇತವಲ್ಕಲ, ಕ್ಷೀರವೃಕ್ಷ, ಕ್ರಿಮಿಕಂಠ, ಬ್ರಹ್ಮವೃಕ್ಷ, ಅಪುಷ್ಪಫಲಸಂಬಂಧ, ಹರಿತಾಕ್ಷ, ಕ್ಷೀರವೃಕ್ಷಕ, ಹೇಮದುಗ್ಧ, ಸೌಮ್ಯ, ಶೀತಫಲ, ಶೀತವಲ್ಕಲ, ಶ್ವೇತವಲ್ಕಲ, ಸುಚಕ್ಷು, ಯಜ್ಞಫಲ, ಯಜ್ಞಯೋಗ, ಯಜ್ಞಸ್ವರ, ಹೇಮದುಗ್ಧಕ.

ಅತ್ತಿಯ ಹಣ್ಣಿನಲ್ಲಿ ಜಂತುಗಳಿರುವುದರಿಂದ ಇದನ್ನು 'ಜಂತುಫಲ' ಎಂದು ಕರೆಯುತ್ತಾರೆ. ಅತ್ತಿಯ ಹಾಲಿನಂತಹ ದ್ರವ ಪದಾರ್ಥವು ಹಳದಿಬಣ್ಣದಿಂದ ಕೂಡಿರುವುದರಿಂದ ಇದನ್ನು 'ಹೇಮದುಗ್ಧಾ' ಎಂಬ ಹೆಸರಿನಿಂದ ಕರೆಯುತ್ತಾರೆ. ಅತ್ತಿಯಲ್ಲಿ ಹಾಲಿನಂತಹ ದ್ರವ ಪದಾರ್ಥವಿರುವುದರಿಂದ 'ಕ್ಷೀರವೃಕ್ಷ' ಎಂಬುದಾಗಿ ಕರೆಯುತ್ತಾರೆ.

**ದ್ರವ್ಯದ ವರ್ಣನೆ :**

ಹಳ್ಳಿಯಲ್ಲಿ ಅತ್ಯಂತ ಜನಪ್ರಿಯವಾಗಿರುವ ಈ ಮರವು ೯-೧೨ ಮೀಟರ್‌ನಷ್ಟು ಎತ್ತರವಾಗಿ ಬೆಳೆಯುತ್ತದೆ. ಎಲೆ, ಫಲ, ಕಾಯಿ, ತೊಗಟೆಯಂಥ ಬಿಳಿಹಳದಿ ಬಣ್ಣದ ಅಂಟಾದ ಹಾಲು ಬರುವುದು. ಕಾಯಿ ಹಸಿರಾಗಿದ್ದು, ಹಣ್ಣಾದಾಗ ಕೆಂಪು ಬಣ್ಣವನ್ನು ಹೊಂದುವುದು. ಹಣ್ಣೂ ಮೃದುವಾಗಿ ಪರಿಮಳದಿಂದ ಕೂಡಿದೆ. ನೋಡಲು ಸುಂದರವಾಗಿರುವ ಹಣ್ಣಿನ ಒಳಗಡೆ ಇರುವೆಗಳಿವೆ. ಹಣ್ಣಿನ ಒಳಗಡೆ ನೂರಾರು ಸಣ್ಣದಾದ ಬೀಜಗಳಿರುತ್ತದೆ. ಭಾರತ ಮತ್ತು ಶ್ರೀಲಂಕಾ ದೇಶಗಳಲ್ಲಿ ಈ ದ್ರವ್ಯವು ಹೆಚ್ಚಾಗಿ ಬೆಳೆಯುತ್ತದೆ.

**ವಿಧಗಳು :**

ರಾಜನಿಘಂಟುಕಾರನ ಪ್ರಕಾರ ಅತ್ತಿಯಲ್ಲಿ ಮೂರು ಭೇದಗಳಿವೆ, ಅವು ೧. ಉದುಂಬರ ೨.ಕಾಕ ಉದುಂಬರ, ೩. ನದ್ಯೋದುಂಬರ. ಸಸ್ಯ ಶಾಸ್ತ್ರದಲ್ಲಿ ಇದನ್ನು ಕ್ರಮವಾಗಿ Ficus glomerata, Ficus hispida ಮತ್ತು Ficus carica ಎಂಬುದಾಗಿ ಕರೆಯುತ್ತಾರೆ.

**ಉಪಯುಕ್ತ ಅಂಗಗಳು :** ತೊಗಟೆ, ಹಣ್ಣು, ನಿರ್ಯಾಸ, ಬೇರು, ಕಾಯಿ.

* ಮೂಡಬಿದರೆ.

ಇಂದಿನ ಸಮಷ್ಟಿಪ್ರಜ್ಞೆಯ ಒಂದು ಮುಖ ಮಾನವನ ಸರ್ವಸಮಾನತೆ. ಮತ್ತೊಂದು ಮುಖ ಸ್ವತಂತ್ರ ವಿಚಾರಶೀಲತೆ.
- ಕೆ. ರಾಮಕೃಷ್ಣ

**ದ್ರವ್ಯದ ಗುಣಧರ್ಮಗಳು :**

ರಸ : ಕಷಾಯ

ಗುಣ : ಗುರು, ರೂಕ್ಷ

ವೀರ್ಯ : ಶೀತ

ವಿಪಾಕ : ಕಟು

ಕರ್ಮ : ಪಿತ್ತಕಫಹರ, ವ್ರಣರೋಪಣ, ಶೋಧನ

***ಉದುಂಬರೋ ಹಿಮೋ ರೂಕ್ಷೋ ಗುರುಃ ಪಿತ್ತಕಫಾಸ್ರಜಿತ್।***
***ಮಧುರಃ ತುವರೋ ವರ್ಣ್ಯೋ ವ್ರಣಶೋಧನರೋಪಣಃ ॥***

॥ ಭಾವಪ್ರಕಾಶ॥

ಎಂದರೆ ಅತ್ತಿಯು ಗುರು, ರೂಕ್ಷ ಗುಣಗಳಿಂದ ಕೂಡಿದೆ. ಶೀತವೀರ್ಯದಿಂದ ಕೂಡಿದೆ, ಮಧುರ ಮತ್ತು ಕಷಾಯ ರಸದಿಂದ ಕೂಡಿದೆ. ಪಿತ್ತಕಫಹರವಾಗಿದೆ. ವ್ರಣಶೋಧನ ರೋಪಣ ಕಾರ್ಯವನ್ನು ಮಾಡುತ್ತದೆ.

**ಔಷಧಿ ಪ್ರಮಾಣ :**

ಚೂರ್ಣ : ೩-೬ ಗ್ರಾಂ

ಕಷಾಯ : ೫೦-೧೦೦ ಮಿ.ಲೀ.

ನೀರ್ಯಾಸ : ೫-೧೦ ಬಿಂದು

**ಔಷಧಿ ಯೋಗಗಳು :**

* ಪಂಚವಲ್ಕ * ಪಂಚಕ್ಷೀರೀ * ಉದುಂಬರ ರಸಾಯನ
* ಉದುಂಬರಾದಿ ತೈಲ * ಉದುಂಬರ ಸಾರ

**ಔಷಧಿಯ ಉಪಯೋಗಗಳು :**

* ಮಧುಮೇಹದವರು ಅತ್ತಿಹಣ್ಣು ಮತ್ತು ನೇರಳೇಹಣ್ಣಿನ ಬೀಜದ ಚೂರ್ಣವನ್ನು ಸಮಾನ ಪ್ರಮಾಣದಲ್ಲಿ ಮಿಶ್ರಿಸಿ ಸೇವಿಸಬೇಕು.
* ಅತ್ತಿಯ ತೊಗಟೆಯ ಭಸ್ಮವನ್ನು ಜೇನುತುಪ್ಪ ಮತ್ತು ತುಪ್ಪದೊಂದಿಗೆ ಮಿಶ್ರಿಸಿ, ಸೇವಿಸುವುದರಿಂದ ಬಿಕ್ಕಳಿಕೆಯು ಕಡಿಮೆಯಾಗುತ್ತದೆ.
* ಅತ್ತಿಯ ಮರದ ಎಲೆ, ಫಲ ಮತ್ತು ಚಕ್ಕೆಯ ಚೂರ್ಣಕ್ಕೆ ಸಮಾನ ಪ್ರಮಾಣದಷ್ಟು ಅತಿಮಧುರದ ಚೂರ್ಣವನ್ನು ಮಿಶ್ರಿಸಿ, ಆ ಚೂರ್ಣಕ್ಕೆ ಅತ್ತಿ ಎಲೆಗಳ ರಸದಿಂದ ಭಾವನೆ ಕೊಡಬೇಕು. ಇದರ ಸೇವನೆಯಿಂದ ಕೆಮ್ಮು ಮತ್ತು ಉಬ್ಬಸ ರೋಗಗಳು ಗುಣವಾಗುವುದು.
* ಅತ್ತಿಯ ಹಾಲನ್ನು ಸಕ್ಕರೆ ಪುಡಿ ಸಮೇತ ಸೇವಿಸುವುದರಿಂದ ಅತಿಸಾರ ರೋಗವು ನಿವಾರಣೆಯಾಗುವುದು.
* ಪಕ್ವವಾದ ಅತ್ತಿಹಣ್ಣನ್ನು ಸೇವಿಸುವುದರಿಂದ ಅಶಕ್ತತೆ ಮತ್ತು ಸ್ನಾಯುಗಳ ದೌರ್ಬಲ್ಯತೆ ನಾಶವಾಗುತ್ತದೆ.
* ಅತ್ತಿಕಾಯಿಯನ್ನು ಬೇಯಿಸಿ, ಅದಕ್ಕೆ ಮೊಸರು ಸೇರಿಸಿ ಸೇವಿಸುವುದರಿಂದ ಗ್ರಹಣೀ ರೋಗ ನಿವಾರಣೆಯಾಗುತ್ತದೆ.
* ಅತ್ತಿಯ ತೊಗಟೆಯ ಚೂರ್ಣವನ್ನು ಅಕ್ಕಿಯ ಹಾಲು ಅಥವಾ ತಾಯಿಯ ಮೊಲೆ ಹಾಲಿನಲ್ಲಿ ಬೆರೆಸಿ ಸೇವಿಸುವುದರಿಂದ ಅತಿಯಾದ ಜಠರಾಗ್ನಿಗೆ ಒಳ್ಳೆಯದು.
* ಹಣ್ಣಾದ ಉದುಂಬರ ಹಣ್ಣಿನ ರಸಕ್ಕೆ ಸಕ್ಕರೆ ಬೆರಸಿ ಸೇವಿಸುವುದರಿಂದ ಬಾಯಾರಿಕೆಯು ನಿವಾರಣೆಯಾಗುತ್ತದೆ.
* ಹತ್ತಿಯ ಹಣ್ಣಿನ ರಸವನ್ನು ಜೇನುತುಪ್ಪ ರಸದೊಂದಿಗೆ ಬೆರೆಸಿ ಸೇವಿಸುವುದರಿಂದ ರಕ್ತ ಪ್ರದರ ರೋಗವು ನಿವಾರಣೆಯಾಗುತ್ತದೆ.
* ಅತ್ತಿಯ ಹಣ್ಣನ್ನು ಜೇನುತುಪ್ಪದೊಡನೆ ಸೇವಿಸುವುದರಿಂದ ಮೂಗು, ಬಾಯಿ, ಮೂತ್ರದ್ವಾರ, ಮಲದ್ವಾರಗಳಲ್ಲಿ ರಕ್ತ ಅಂದರೆ ರಕ್ತಪಿತ್ತರೋಗಕ್ಕೆ ಒಳ್ಳೆಯದು.
* ಅತ್ತಿಯ ಹಣ್ಣಿನ ಚೂರ್ಣಕ್ಕೆ ಕಲ್ಲುಸಕ್ಕರೆ ಪುಡಿ ಸೇರಿಸಿ, ಹಾಲಿನಲ್ಲಿ ಮಿಶ್ರಿಸಿ ಕುಡಿದರೆ ೧೫ ದಿವಸದೊಳಗೆ ವೀರ್ಯಕ್ಕೆ ಸಂಬಂಧಿಸಿದ ರೋಗಗಳು ನಿವಾರಣೆಯಾಗುತ್ತದೆ.
* ಅತ್ತಿಯ ಹಣ್ಣು ಎರಡಾಣೆ ತೂಕ ಚೂರ್ಣಕ್ಕೆ, ಹಾಲು ಸಕ್ಕರೆ ಮಿಶ್ರಿಸಿ ಸೇವಿಸಿದರೆ ಭೇದಿ ನಿಲ್ಲುತ್ತದೆ. ☆

**ಶ್ರೀವಾಣಿ**

ಸಾರ್ವಜನಿಕ ಸ್ಥಾನಗಳಲ್ಲಿರುವವರು ಎಷ್ಟು ಎಚ್ಚರವಾಗಿದ್ದರೂ ಸಾಲದು. ಜನಕಂಜಿ ನಡೆಯುವುದಕ್ಕಿಂತ ಮನಕಂಜಿ ನಡೆಯುವ ಅಂತರಂಗ ಬಹಿರಂಗ ಶುದ್ಧಿಯನ್ನು ಕಾಪಾಡಿಕೊಳ್ಳಬೇಕು. ಜನರು ತಮ್ಮ ಮೇಲಿಟ್ಟ ನಂಬಿಕೆಗೆ ಮೋಸಮಾಡಬಾರದು. ಅಧಿಕಾರ ಶಾಶ್ವತ ಅಲ್ಲ.

**ನಿಜವಾದ ಸನ್ಯಾಸವೆಂದರೆ ಮನಸ್ಸನ್ನು ಶುಚಿಗೊಳಿಸಿಕೊಳ್ಳುವುದು.**
**-ಡಾ. ಬಸವರಾಜ ಸಬರದ**







# ತೀವ್ರರೋಗಗಳಲ್ಲಿ ನಿಸರ್ಗೋಪಚಾರ

## ಕಜ್ಜಿ

**-ಜಿ.ವಿ. ವೆಂಕಟನಾರಾಯಣ ಶಾಸ್ತ್ರಿ** *

***ಕಜ್ಜಿ : ಕುರುವು ದೊಡ್ಡಣ್ಣ ಅದರ ತಮ್ಮ ಈ ಕಜ್ಜಿ***
***ಈಚೆಗಿದು ಕಡಿಮೆಯಾಗಿದೆ ಎನ್ನುವಳು ನಮ್ಮಜ್ಜಿ***
***ಅಣ್ಣನಿಗಿಂತ ಕಡಿಮೆ ಏನಿಲ್ಲ ಈ ತಮ್ಮ***
***ನೋವಿನ ಜತೆಗ ಅಸಹ್ಯಕರ, 'ಅಮ್ಮಮ್ಮ'***

ಎರಡನೆಯ ಮಹಾಯುದ್ಧದ ನಂತರ ಸಾಧಾರಣವಾಗಿ ಯಾವ ಮಕ್ಕಳ ಕೈಯನ್ನು ನೋಡಿದರೂ ಇದರ ದರ್ಶನ. ಆಗ ಜನರು ಕೊಡುತ್ತಿದ್ದ ಕಾರಣ ಅವರು ತಿನ್ನುತ್ತಿದ್ದ ರಂಗೂನ್ ಅಕ್ಕಿ, ಜೊತೆಗೆ ಯುದ್ಧದಲ್ಲಿ ಉಪಯೋಗಿಸಿದ ಶಸ್ತ್ರಾಸ್ತ್ರಗಳ ಪ್ರಭಾವ. ವೈದ್ಯಕೀಯವಾಗಿ ಇದು ಕ್ರಿಮಿಗಳಿಂದ ಹರಡುವ ಸಾಂಕ್ರಾಮಿಕ ರೋಗ. ಈಗಲೂ ಬರಬಾರದೆಂದಿಲ್ಲ. ಆಗ ಸಾಮಾನ್ಯವಾಗಿದ್ದುದು ಈಗ ಅಪರೂಪವಾಗಿ ಬರುತ್ತದೆ.

**ಲಕ್ಷಣಗಳು :** ಕೈಬೆರಳುಗಳ ಸಂದಿ ಇದರ ಸ್ಥಾನ. ಮೊದಲು ಕೆಂಪಗಾಗಿ ಆ ಜಾಗ ಊದಿಕೊಂಡು ಗಟ್ಟಿಯಾಗುತ್ತದೆ. ನಂತರ ಸಣ್ಣ ಸಣ್ಣ ಅನೇಕ ಮುತ್ತಿನ ಮಣಿಯಂತಹ ಬೆಳ್ಳಗಿನ ಗುಳ್ಳೆಗಳಾಗುತ್ತವೆ. ಆಮೇಲೆ ಅವರೇಕಾಳಿನಂತಹ ಹಳದಿ ಬಣ್ಣಕ್ಕೆ ತಿರುಗಿದ ಗುಳ್ಳೆಗಳಾಗಿ ಮಾರ್ಪಡುತ್ತವೆ. ಒಮ್ಮೆ ಎಲ್ಲವೂ ವಾಸಿಯಾದ ಮೇಲೆ ಮತ್ತೊಮ್ಮೆ ಅದೇ ರೀತಿ ಪ್ರಾರಂಭವಾಗುತ್ತದೆ. ಹೀಗೆಯೇ ಅನೇಕ ದಿವಸಗಳವರೆಗೆ, ತಿಂಗಳು ಗಳವರೆವಿಗೂ ಕಾಡಿಸುತ್ತಿರುತ್ತದೆ. ಕೀವೆಲ್ಲಾ ಹೊರಕ್ಕೆ ಹೋದ ನಂತರ ಅತಿಯಾದ ನವೆಯು ಪ್ರಾರಂಭವಾಗುತ್ತದೆ. ನೋವು, ಉರಿ, ನವೆಗಳಿಂದ ಕೂಡಿ ನೋಡಲು ಬಹಳ ಅಸಹ್ಯಕರವಾದ ಕಾಯಿಲೆ.

**ಕಾರಣ :** ಕ್ರಿಮಿಗಳು, ಅವುಗಳು ಬರಲು ಕಾರಣ ಶರೀರದಲ್ಲಿನ ಕೊಳೆ. ಜೀರ್ಣವ್ಯವಸ್ಥೆಯ ಶಿಥಿಲ್ಯ. ಕರುಳು ಮತ್ತು ಮೂತ್ರಜನಕಾಂಗಗಳು ಕೊಳೆಯನ್ನು ಹೊರಕ್ಕೆ ಹಾಕ ಲಾಗದ ಸ್ಥಿತಿ, ಮಲ ಬದ್ಧತೆ. ಇಂತಹ ಸನ್ನಿವೇಶದಲ್ಲಿ ಕ್ರಿಮಿಗಳು ಪ್ರವೇಶಿಸಿ ಕೊಳೆಯನ್ನು ಚರ್ಮದ ಮೂಲಕ ಹೊರಕ್ಕೆ ಹಾಕುವ ಪ್ರಯತ್ನ. ಬೇಸಿಗೆ, ಇದು ಬರಲು ಸಕಾಲ.

**ನಿಸರ್ಗೋಪಚಾರ :**1. ಮೊದಲು ನಿತ್ಯವೂ ಉಗುರು ಬೆಚ್ಚಗಿನ ನೀರಿನಿಂದ ಎನಿಮಾ. 2. ಆಹಾರದಲ್ಲಿ ಪಾಲಿಶ್ ಅಕ್ಕಿ, ಬೇಳೆ, ಸಕ್ಕರೆ, ಬೇಕರಿಯ ತಿಂಡಿಗಳು, ಕರಿದ ಪದಾರ್ಥಗಳನ್ನೂ, ಕಾಫಿ, ಟೀ ಇತ್ಯಾದಿ ಪಾನೀಯಗಳನ್ನೂ ಬಿಟ್ಟುಬಿಡಬೇಕು. 3. ತಾಜಾಹಣ್ಣು, ತರಕಾರಿಗಳು ಊಟದ ಮುಖ್ಯ ಭಾಗವಾಗಬೇಕು. ಯಾವುದೇ ಆದರೂ ಹೆಚ್ಚು ಆಹಾರ ಸೇವಿಸಬಾರದು. 4. ಬರುವ ಚಿಹ್ನೆ ಕಂಡಕೂಡಲೇ ಚೆನ್ನಾಗಿ ವ್ಯಾಯಾಮ ಮಾಡಿ ಬೆವರಿನ ಮೂಲಕ ಕೊಳೆಯನ್ನು ತೆಗೆದುಹಾಕಬೇಕು. 5. ಹಬೆಸ್ನಾನ, ಸೂರ್ಯಸ್ನಾನ ಬಹಳ ಒಳ್ಳೆಯದು 6. ಪ್ರಾರಂಭದ ದೆಸೆಯಲ್ಲಿಯೇ ಮೈಗೆಲ್ಲಾ ಮಣ್ಣನ್ನು ಹಚ್ಚಿಕೊಂಡು ಒಂದೆರಡು ಗಂಟೆಗಳ ಕಾಲ ಬಿಸಿಲಿನಲ್ಲಿದ್ದು ತಣ್ಣೀರಿನ ಸ್ನಾನ ಮಾಡಬೇಕು. 7. ನಿತ್ಯವೂ ಒಗೆದ ಹತ್ತಿಯ ಬಟ್ಟೆ ಯನ್ನು ತೊಡಬೇಕು. 8. ದಿನಕ್ಕೊಮ್ಮೆ ಕಟಿಸ್ನಾನ, ಲಿಂಗಸ್ನಾನ 9. ಹೆಚ್ಚು ನೀರು ಕುಡಿಯಬೇಕು 10. ದಿನಕ್ಕೆರಡು ಬಾರಿ ಸ್ನಾನ 11.ಉಪ್ಪಿಲ್ಲದ ಆಹಾರ. ರಕ್ತದ ಆಮ್ಲೀಯತೆಯು ಹೆಚ್ಚುವುದರಿಂದ ಬರುವ ಕಾಯಿಲೆಯಾದ್ದರಿಂದ ಅದನ್ನು ಪ್ರತ್ಯಾಮ್ಲೀಯದ ಕಡೆಗೆ ತಿರುಗಿಸಲು ಪ್ರಯತ್ನಿಸಬೇಕು. ಆಮ್ಲೀಯತೆ ಹೆಚ್ಚಲು ಆಹಾರ, ವಿಹಾರ, ವ್ಯವಹಾರಗಳೇ ಕಾರಣವಾದ್ದರಿಂದ ಅವುಗಳನ್ನು ತಿದ್ದಿಕೊಳ್ಳಬೇಕು. 12. ಶರೀರಕ್ಕೆ ಪೂರ್ಣ ಪಟ್ಟಿಯನ್ನು ಹಾಕಿ. 13. ನವೆ ಇರುವ ಜಾಗಕ್ಕೆ ಕೊಬ್ಬರಿ ಎಣ್ಣೆ, ನಿಂಬೆರಸದ ಪೇಸ್ಟ್ ಮಾಡಿ ಉಜ್ಜಿ. 14. ಸೋಪ್ ಬಳಸಬೇಡಿ. 15. ಸೊಗದೇ ಬೇರಿನ ಕಷಾಯ ಕುಡಿಯಿರಿ.

**ಮನೆಮದ್ದು :** ಸೊಗದೇ ಬೇರಿನ ಕಷಾಯ.

-ಮುಂದುವರಿಯುತ್ತದೆ.

* 'ನಿಸರ್ಗ ಯೋಗಧಾಮ' ನಂ. ೨/೨೦೬೫, ೧೧ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು -೫೭೨ ೧೦೨.

**ಆಚರಣೆಯು ಜೀವನಕ್ಕೆ ಜೀವ ತುಂಬುವ ವಸ್ತು. -ಮಾತೆ ಮಹಾದೇವಿ**

## ಶ್ರೀ ಸಿದ್ಧಗಂಗಾ ಮಠ, ತುಮಕೂರು

## ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| 314. | ಶ್ರೀ ಬಸವರಾಜ, ಮಲ್ಲಯ್ಯ ಹಿರೇಮಠ, ಬೆಂ. | 10,001.00 |
| 315. | ಶ್ರೀ ವೀರಭದ್ರಯ್ಯ, ಬೆಂಗಳೂರು | 10,000.00 |
| 316. | ಶ್ರೀ ಹೆಚ್.ಸಿ. ಸಿದ್ಧಪ್ಪ, ಬೆಂಗಳೂರು | 1,101.00 |
| 317. | ಶ್ರೀ ಚಿಕ್ಕರಾಮೇಗೌಡ, ಕೆಸಗೋಡು | 500.00 |
| 318. | ಶ್ರೀ ಎನ್. ಹೊನ್ನಗಂಗಯ್ಯ, ತುಮಕೂರು | 5,001.00 |
| 319. | ಶ್ರೀ ಕೆ.ಟಿ. ಹನುಮಂತಯ್ಯ, ಬೆಂಗಳೂರು | 500.00 |
| 320. | ಶ್ರೀ ಟಿ.ಎಸ್. ರಾಮಚಂದ್ರರಾವ್, ತುಮಕೂರು | 1,000.00 |
| 321. | ಶ್ರೀ ಎಸ್.ಟಿ. ಬುಳ್ಳ, ಬಾಗಲಕೋಟೆ | 2,001.00 |
| 322. | ಶ್ರೀ ಬಿ.ಬಿ. ಮರುಳಪ್ಪ, ಚಿಕ್ಕಮಗಳೂರು | 1,000.00 |
| 323. | ಶ್ರೀ ಬಿ.ಎಸ್. ಬಸವರಾಜು, ದಾವಣಗೆರೆ | 2,000.00 |
| 324. | ಶ್ರೀ ಎಂ.ಆರ್. ಸಿದ್ಧಲಿಂಗಯ್ಯ, ತುಮಕೂರು | 1,000.00 |
| 325. | ಶ್ರೀ ಎಂ. ರೆಡ್ಡಪ್ಪಚಾರಿ, ಬಟ್ಲಹಳ್ಳಿ | 1,000.00 |
| 326. | ಶ್ರೀಮತಿ ರಜನಿ ಮೃತ್ಯುಂಜಯ, ಬೆಂಗಳೂರು | 10,300.00 |
| 327. | ಡಾ॥ ಡಿ.ಎಸ್. ಮಹೇಶ್, ಬೆಂಗಳೂರು | 10,300.00 |
| 328. | ಶ್ರೀ ಅವಿನಾಶ್ ಪಟೇಲ್, ಬೆಂಗಳೂರು | 10,300.00 |
| 329. | ಶ್ರೀ ಕೆ.ಬಿ. ವಿರೂಪಾಕ್ಷಯ್ಯ, ಬೆಂಗಳೂರು | 3,000.00 |
| 330. | ಶ್ರೀ ಎಂ.ಜಿ. ಶಿವಲಿಂಗಯ್ಯ, ತುಮಕೂರು | 2,001.00 |
| 331. | ಶ್ರೀ ಸಿಂಗಣ್ಣ, ಶಿವಬಸಪ್ಪ, ಸಂಗೊಳ್ಳಿ, ಬೈಲಹೊಂಗಲ | 2,000.00 |
| 332. | ಶ್ರೀ ಕೆ.ವಿ. ಸುಬ್ಬರಾಯಪ್ಪ, ಕೊಡ್ಲಿಗಾನಹಳ್ಳಿ | 500.00 |
| 333. | ಶ್ರೀ ಕೆ.ಹೆಚ್. ಗಂಗಯ್ಯ, ಕುಣಿಗಲ್ | 10,153.00 |
| 334. | ಶ್ರೀ ಜಿ.ಆರ್. ಶಮೀರ್‌ಕುಮಾರ್, ಬೆಂಗಳೂರು | 5,000.00 |
| 335. | ಶ್ರೀ ಮಹೇಶ್ ಎಂ. ಸುಂಕದಕಟ್ಟೆ, ಬೆಂಗಳೂರು | 1,000.00 |
| 336. | ಶ್ರೀ ಹೆಚ್.ಬಿ. ಮಲ್ಲೇಗೌಡ, ಕುಂದೂರು | 1,001.00 |
| 337. | ಶ್ರೀ ಎಸ್.ಎಸ್. ಕಲ್ಲೂರ್, ಬೆಂಗಳೂರು | 1,001.00 |
| 338. | ಶ್ರೀ ಕೆ.ಬಿ. ಮಹದೇವಯ್ಯ, ಕಾಗ್ಗೆರೆ | 1,000.00 |
| 339. | ಶ್ರೀ ಕೆ.ಎನ್. ಚನ್ನಬಸವಯ್ಯ, ಕಾಗ್ಗೆರೆ | 1,000.00 |
| 340. | ಶ್ರೀ ಹೆಚ್.ಪಿ. ಉಮಾದೇವಿ, ಬೆಂಗಳೂರು | 1,001.00 |
| 341. | ಶ್ರೀ ಜಿ. ಶರಣಪ್ಪ, ಬೆಳಗೊಡಹಾಳ್ | 2,000.00 |
| 342. | ಶ್ರೀ ಎಂ.ಎನ್. ಶಿವಗಂಗಯ್ಯ, ಬೆಂಗಳೂರು | 1,000.00 |
| 343. | ಶ್ರೀ ಎಸ್.ಸಿ. ಬಸವರಾಜು, ಬೆಂಗಳೂರು | 10,001.00 |
| 344. | ಶ್ರೀ ಕೆ.ಸಿ. ಬಸಪ್ಪ, ಬೆಂಗಳೂರು | 11,111.00 |

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| 345. | ಶ್ರೀಮತಿ ಡಿ.ಸಿ. ಉಮಾದೇವಿ, ಬೆಂಗಳೂರು | 5,000.00 |
| 346. | ಡಾ॥ ಗೋಪಾಲಯ್ಯ, ಬೆಂಗಳೂರು | 2,000.00 |
| 347. | ಶ್ರೀ ಪಿ.ಆರ್. ಸೋಮಶೇಖರ್, ಬೆಂಗಳೂರು | 60,000.00 |
| 348. | ಶ್ರೀ ಎನ್. ಬಸಪ್ಪ, ಕರೂರು | 1,000.00 |
| 349. | ಶ್ರೀ ಎಸ್. ರಾಜಶೇಖರನ್, ಬೆಂಗಳೂರು | 1,001.00 |
| 350. | ಶ್ರೀ ಜಿ. ಕರಿಸಿದ್ಧಯ್ಯ, ತಿಪಟೂರು | 20,001.00 |
| 351. | ಡಾ. ಎಸ್.ಎಸ್. ಗುರುಪ್ರಕಾಶ್, ತುಮಕೂರು | 10,000.00 |
| 352. | ಶ್ರೀ ಹೆಚ್.ಆರ್. ನಂಜುಂಡಸ್ವಾಮಿ, ಬೆಂಗಳೂರು | 1,001.00 |
| 353. | ಶ್ರೀ ಡಿ.ಬಿ. ಸೋಮಣ್ಣ, ಗುಡಗಳಲೆ | 1,000.00 |
| 354. | ಶ್ರೀ ಜಿ.ಹೆಚ್. ಗಂಗಾಧರಯ್ಯ, ತುಮಕೂರು | 1,000.00 |
| 355. | ಶ್ರೀ ಹೆಚ್.ಎಸ್. ಚಂದ್ರಶೇಖರಮೂರ್ತಿ, ಬೆಂಗಳೂರು | 10,001.00 |
| 356. | ಶ್ರೀ ಪಾಲಾಕ್ಷ, ಬೆಂಗಳೂರು | 2,000.00 |
| 357. | ಶ್ರೀ ಎಂ. ರುದ್ರಸ್ವಾಮಿ, ಬಿದರವಳ್ಳಿ | 2,100.00 |
| 358. | ಶ್ರೀ ವಿ. ರಾಜಣ್ಣ, ರಾಮನಗರ | 1,000.00 |
| 359. | ಶ್ರೀ ಎನ್.ಎಸ್. ನಾರಾಯಣಪ್ಪ, ತುಮಕೂರು | 1,001.00 |
| 360. | ಶ್ರೀ ವಿ.ಪಿ. ಗಂಗಣ್ಣ, ತುಮಕೂರು | 1,000.00 |
| 361. | ಶ್ರೀ ಶಿವಮೂರ್ತಯ್ಯಸ್ವಾಮಿ, ಪ ಕಟಗೆಹಳ್ಳಿಮಠ, ಬೆಂಗಳೂರು ಗುತ್ತಲ | 1,000.00 |
| 362. | ಶ್ರೀ ವಿ. ಶ್ರೀಕಂಠಯ್ಯ, ಬೆಂಗಳೂರು | 2,000.00 |
| 363. | ಶ್ರೀಮತಿ ಶಶಿಕಲ, ತುಮಕೂರು | 2,000.00 |
| 364. | ಶ್ರೀ ಬಿ. ಬಸವರಾಜು, ಬೆಂಗಳೂರು | 1,000.00 |
| 365. | ಶ್ರೀ ಸುಜನಮನಿಕಂಠಸ್ವಾಮಿ, ಕಿಲಗೆರಿ | 1,000.00 |
| 366. | ಶ್ರೀ ಕೆ.ಮೋಹನ, ಬೆಂಗಳೂರು | 1,101.00 |
| 367. | ಶ್ರೀ ಎಂ. ಚಂದ್ರಶೇಖರಯ್ಯ, ಮಲಪನಹಳ್ಳಿ | 1,000.00 |
| 368. | ಶ್ರೀ ಹೆಚ್.ಬಿ.ಎಸ್. ಆರಾಧ್ಯ, ಬೆಂಗಳೂರು | 2,000.00 |
| 369. | ಶ್ರೀ ಎಸ್.ಐ. ಕನಗಲಿ, ಗೋಕಾಕ್ | 1,111.00 |
| 370. | ಶ್ರೀ ಎ.ಆರ್. ರುದ್ರಪ್ಪ, ಬೆಂಗಳೂರು | 1,001.00 |
| 371. | ಶ್ರೀ ಜಿ.ಹೆಚ್. ಗಂಗಾಧರಯ್ಯ, ಶ್ರೀಮಠ | 5,000.00 |
| 372. | ಶ್ರೀ ಹೆಚ್.ಜಿ. ಜಗದೀಶ್, ಈಚನೂರು | 1,005.00 |
| 373. | ಶ್ರೀಮತಿ ಬಿ.ಜಿ. ರತ್ನಮ್ಮ ರಾಜಶೇಖರ್, ಬೆಂಗಳೂರು | 10,000.00 |
| 374. | ಶ್ರೀ ಎನ್.ಜಿ. ಚಂದ್ರಶೇಖರ್, ನೇರಲಗಿ | 2,111.00 |



ತುಮಕೂರಿನಲ್ಲಿ ಸುಕೃತ ಆಸ್ಪತ್ರೆ ಮತ್ತು ಪ್ರನಾಳಶಿಶು ಚಿಕಿತ್ಸಾ ಕೇಂದ್ರವನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಸುಕೃತ ಆಸ್ಪತ್ರೆಯ ಡಾ. ಎಲ್.ಡಿ. ಶ್ರೀನಿವಾಸ ದಂಪತಿಗಳು ಉಪಸ್ಥಿತರಿದ್ದರು.



ಶಿಕ್ಷಣ ತಜ್ಞರು ಹಾಗೂ ಶ್ರೇಷ್ಠ ಅಂಕಣ ಬರಹಗಾರರು ಆದ ಶ್ರೀ ಗುರುರಾಜ ಕರ್ಜಗಿ ಮತ್ತು ಕುಟುಂಬ ವರ್ಗದವರು ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯರ ದಿವ್ಯಾಶೀರ್ವಾದ ಪಡೆದರು.



ಶ್ರೀ ಕೊಪ್ಪಲ್ ನಾಗರಾಜ್ ಮತ್ತು ಕುಟುಂಬದವರು ಸ್ಥಾಪಿಸಿದ ಲಿಂ. ಕೊಪ್ಪಲ್ ಸಿದ್ದವೀರಯ್ಯ ಮತ್ತು ಪಾರ್ವತಮ್ಮನವರ ಸ್ಮರಣಾರ್ಥ ಪ್ರತಿಷ್ಠಾನದ ವತಿಯಿಂದ ಮಹೇಶ್ ಪಿ.ಯು. ಕಾಲೇಜಿನ ಪ್ರತಿಭಾವಂತ ವಿದ್ಯಾರ್ಥಿನಿ ಕು|| ಅಕ್ಷ ಅವರಿಗೆ ಉನ್ನತ ವ್ಯಾಸಂಗಕ್ಕೆ ನೆರವಾಗಲು ನೀಡಿದ ಚೆಕ್‌ನ್ನು ಪೂಜ್ಯ ಶ್ರೀಗಳವರು ನೀಡಿ ಅಶೀರ್ವದಿಸಿದರು.




ತುಮಕೂರು ಸಿದ್ಧಗಂಗಾ ಪಾಲಿಟೆಕ್ನಿಕ್ ಕಾಲೇಜಿನಲ್ಲಿ ನಡೆದ ಪ್ರಥಮ ವರ್ಷದ ಡಿಪ್ಲೋಮ್ ತರಗತಿಗಳ ಪ್ರಾರಂಭೋವತ್ಸವನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಪ್ರಾಂಶುಪಾಲ ಶ್ರೀ ಬಿ. ಸುರೇಶ್ ಮೊದಲಾದವರು ಹಾಜರಿದ್ದರು.



ಶ್ರೀಮಠದ ಉನ್ನತ ಪ್ರೌಢಶಾಲೆಯಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಏರ್ಪಡಿಸಿದ್ದ ಪ್ರತಿಭಾ ಪುರಸ್ಕಾರ ಹಾಗೂ ಬೀಳ್ಕೊಡುಗೆ ಸಮಾರಂಭದಲ್ಲಿ ಶಾಲೆಯ ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು.



ಏಪ್ರಿಲ್ 1 ರಂದು, ಗುಲ್ಬರ್ಗದಲ್ಲಿ ಪರಮಪೂಜ್ಯ ಶ್ರೀಗಳವರ ಜನ್ಮದಿನೋತ್ಸವದ ಅಂಗವಾಗಿ ಏರ್ಪಡಿಸಿದ್ದ ಸಮಾರಂಭದಲ್ಲಿ ಶ್ರೀಮತಿ ಪ್ರಮೀಳ ಡಿಗ್ಗಾವಿ, ಪ್ರೊ. ಸೂಗಯ್ಯ ಹಿರೇಮಠ ಡಾ. ಕೃಷ್ಣಾಜಿ ಕುಲಕರ್ಣಿ ಅವರನ್ನು ಸನ್ಮಾನಿಸಲಾಯಿತು. ಈ ಸಂದರ್ಭದಲ್ಲಿ ಶ್ರೀ ರಾಜಶೇಖರ್ ಶಿವಾಜಿ, ಶ್ರೀ ಬಿ.ಟಿ. ಪಾಟೀಲ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bengaluru-10. Ph : 23404232